| | |
|---|---|
| मैं और पाँच रुपये तुमको दूँगा। | ನಾನು ನಿಮಗೆ ಇನ್ನೂ ಐದು ರೂಪಾಯಿ ಕೊಡುವೆನು. |
| मैं दो दिन और यहाँ ठहरूँगा। | ನಾನು ಇನ್ನೂ ಎರಡು ದಿನ ಇಲ್ಲಿ ನಿಲ್ಲುವೆನು. |
| और लोग इसे नहीं चाहेंगे। | ಇತರ ಜನರು ಇದನ್ನು ಬಯಸುವುದಿಲ್ಲ. |

---

## ಪಾಠ 12

### ಕೃದಂತ ಭಾವನಾಮ

25. ಮೂಲಧಾತುವಿಗೆ **ना** ಪ್ರತ್ಯಯವನ್ನು ಸೇರಿಸುವುದರಿಂದ ಕೃದಂತ ಭಾವನಾಮದ ರೂಪವಾಗುವುದು.

ಉದಾ :—**खाना** ಊಟಮಾಡುವುದು

**पढ़ना** ಓದುವುದು

**देखना** ನೋಡುವುದು, ಇತ್ಯಾದಿ.

26. ಈ ರೂಪಕ್ಕೆ ಹಿಂದಿಯಲ್ಲಿ ಎರಡು ಬಗೆಯ ಉಪಯೋಗಗಳುಂಟು :—(1) ವಿಧ್ಯರ್ಥದಲ್ಲಿ ಮತ್ತು (2) ಕ್ರಿಯಾ ಭಾವವನ್ನು ವ್ಯಕ್ತಪಡಿಸುವುದರಲ್ಲಿ.

(1) ವಿಧ್ಯರ್ಥದಲ್ಲಿ ಅದನ್ನು **तुम** ಎಂಬ ಸರ್ವನಾಮದೊಂದಿಗೆ ಭವಿಷ್ಯತ್ಕಾಲವನ್ನು ಸೂಚಿಸಲು ಉಪಯೋಗಿಸುವರು.

ಉದಾ :—**यह काम मत करना** ಈ ಕೆಲಸವನ್ನು (ಇನ್ನುಮುಂದೆ) ನೀವು ಮಾಡಬಾರದು.

**वहाँ कभी मत जाना** ಅಲ್ಲಿಗೆ ಎಂದಿಗೂ ಹೋಗಬಾರದು.

(2) ಕ್ರಿಯಾ ಭಾವವನ್ನು ವ್ಯಕ್ತಪಡಿಸಲು ಉಪಯೋಗಿಸಿದಾಗ ಅದಕ್ಕೆ ಪುಲ್ಲಿಂಗ ನಾಮಪದಗಳಂತೆ ಪ್ರಯೋಗವುಂಟು.

ಉದಾ :—**देर से जागना बुरा है** ಹೊತ್ತಾಗಿ ಏಳುವುದು ಕೆಟ್ಟದ್ದು.

**क्या उसका जाना ज़रूरी है?** ಅವನು ಹೋಗಬೇಕಾದ್ದು ಅಗತ್ಯವೇ ?

27. ಕೃದಂತ ಭಾವನಾಮದ ಮುಂದೆ ವಿಭಕ್ತಿ ಪ್ರತ್ಯಯಗಳು ಬಂದಾಗ ಅಂತ್ಯದಲ್ಲಿರುವ **ना** ಎಂಬುದು **ने** ಎಂಬ ರೂಪವನ್ನು ಪಡೆಯುವುದು. (आ, ए, ई ನಿಯಮ ನೋಡಿ).

ಉದಾ:—वह पढ़ने के लिए यहाँ आता है ಅವನು ಇಲ್ಲಿ ಓದುವುದಕ್ಕೆ ಬರುತ್ತಾನೆ.

ख़ूब पढ़ने से परीक्षा पास करोगे ಚೆನ್ನಾಗಿ ಓದುವುದರಿಂದ ಪರೀಕ್ಷೆಯಲ್ಲಿ ತೇರ್ಗಡೆಯಾಗುವೆ.

वहाँ जाने में देर मत करो ಅಲ್ಲಿ ಹೋಗಲು ತಡಮಾಡಬೇಡ.

ಸೂಚನೆ:—'के लिए' ಎಂಬುದನ್ನು जा ಅಥವಾ आ ಎಂಬವುಗಳ ಕೃದಂತ ಭಾವರೂಪಗಳಮುಂದೆ ಲೋಪಮಾಡುವುದುಂಟು.

ಉದಾ:—मैं खाने जाता हूँ ನಾನು ಊಟಕ್ಕೆ ಹೋಗುತ್ತೇನೆ.

वह रोज़ यहाँ सोने आता है ಅವನು ಪ್ರತಿನಿತ್ಯವೂ ಇಲ್ಲಿ ಮಲಗುವುದಕ್ಕೆ ಬರುತ್ತಾನೆ.

ನಾಮಪದಗಳು

| | |
|---|---|
| **आँख** (ಸ್ತ್ರೀ) ಕಣ್ಣು | **कान** ಕಿವಿ |
| **बाल** ಕೂದಲು | **बदन, शरीर** ದೇಹ |
| **सूरज** ಸೂರ್ಯ | **चाँद** ಚಂದ್ರ |
| **छुट्टी** (ಸ್ತ್ರೀ) ರಜೆ | **चीज़** (ಸ್ತ್ರೀ) ವಸ್ತು |
| **बेवक़ूफ़** ಮೂರ್ಖ | **अक़्लमंद** ಬುದ್ಧಿವಂತ |
| **वक़्त, समय** ಕಾಲ, ಸಮಯ | **बार** (ಸ್ತ್ರೀ) ಸಲ, ಬಾರಿ |
| **तबीयत** ದೇಹಸ್ಥಿತಿ, ಆರೋಗ್ಯ | **प्याला** ಬಟ್ಟಲು, ಕಪ್ |

ಸಮುಚ್ಚಯ ಬೋಧಕಾವ್ಯಯಗಳು

| | |
|---|---|
| **और, व** ಮತ್ತು | **या** ಅಥವಾ |
| **लेकिन, पर** ಆದರೆ | **अगर** ರೆ |

क्योंकि ಏಕೆಂದರೆ | कि ಎಂದು, ಏನೆಂದರೆ
इसलिए ಆದ್ದರಿಂದ | तो भी ಆದಾಗ್ಗೂ, ಆದರೂ

ವಿಶೇಷಣಗಳು

ठंडा ತಣ್ಣಗಿರುವ | गरम ಬಿಸಿಯಾದ
तेज़ ಚುರುಕಾದ, ವೇಗವಾದ | सुस्त ಸೋಮಾರಿಯಾದ, ಬಳಲಿದ
मुलायम ಮೃದುವಾದ | कड़ा, सख़्त ಗಟ್ಟಿ, ಕಠಿಣ
ख़ूबसूरत, सुन्दर ಸುಂದರವಾದ ಚೆಲುವಾದ | उमदा ಶ್ರೇಷ್ಠ, ಒಳ್ಳೆಯ
मुश्किल ಕಷ್ಟವಾದ | आसान ಸುಲಭ
| ताज़ा ಆಗತಾನೆ ತಯಾರಾದ, ಹಸನಾದ

| | |
|---|---|
| कल छुट्टी है, इसलिए तुम स्कूल मत जाना। | ನಾಳೆ ರಜಾ ಇವೆ, ಆದ್ದರಿಂದ ನೀವು ಶಾಲೆಗೆ ಹೋಗಬಾರದು. |
| ताज़े फल खाना अच्छा है। | ಹೊಸ ಹಣ್ಣುಗಳನ್ನು ತಿನ್ನುವುದು ಒಳ್ಳೆಯುದು. |
| हमारी आँखें देखने के लिए और कान सुनने के लिए हैं। | ನಮ್ಮ ಕಣ್ಣುಗಳು ನೋಡುವುದಕ್ಕೂ ಕಿವಿಗಳು ಕೇಳುವುದಕ್ಕೂ ಇವೆ. |
| सूरज निकलने में अभी देर है। | ಸೂರ್ಯನು ಉದಯಿಸಲು ಇನ್ನೂ ಹೊತ್ತಿದೆ. |
| जल्दी उठो, यह सोने का वक़्त (समय) नहीं है। | ಜಾಗ್ರತೆಯಾಗಿ ಏಳು, ಇದು ನಿದ್ರಿಸುವ ಸಮಯುವಲ್ಲ. |
| ठंडे पानी से नहाना शरीर के लिए बहुत अच्छा है। | ತಣ್ಣೀರಿನಿಂದ ಸ್ನಾನಮಾಡುವುದು ಶರೀರಕ್ಕೆ ಬಹಳ ಒಳ್ಳೆಯುದು. |
| यह काम करना उनके लिए बहुत मुश्किल नहीं है। | ಈ ಕೆಲಸಮಾಡುವುದು ಅವರಿಗೆ ಬಹು ಕಷ್ಟವಲ್ಲ. |
| यह उनके लिए बहुत आसान है। | ಇದು ಅವರಿಗೆ ಬಹು ಸುಲಭ. |
| किसी काम को मुश्किल मत समझो। | ಯಾವ ಕೆಲಸವನ್ನೂ ಕಷ್ಟವೆಂದೂ ತಿಳಿಯಬೇಡ. |

| | |
|---|---|
| उसका लड़का पढ़ने-लिखने में वड़ा तेज़ है। | ಅವನ ಮಗನು ಓದುಬರಹದಲ್ಲಿ ಬಹು ಚುರುಕು. |
| उसके वाल वहुत मुलायम और लंवे हैं। | ಅವನ ಕೂದಲು ಬಹು ಮೃದುವಾಗಿಯೂ ಉದ್ದವಾಗಿಯೂ ಇವೆ. |
| कल से वे दफ़्तर नहीं जाते, क्योंकि उनकी तवीयत अच्छी नहीं है। | ನಿನ್ನೆಯಿಂದ ಅವರು ಆಫೀಸಿಗೆ ಹೋಗುತ್ತಿಲ್ಲ, ಏಕೆಂದರೆ ಅವರ ದೇಹಸ್ಥಿತಿಯು ಚೆನ್ನಾಗಿಲ್ಲ. |
| तुम रोज़ दो वार मेरे घर के पास आते हो, लेकिन मुझसे एक वार भी नहीं मिलते। | ನೀವು ಪ್ರತಿದಿನವೂ ಎರಡುಸಲ ನನ್ನ ಮನೆಯ ಹತ್ತಿರ ಬರುತ್ತೀರಿ, ಆದರೆ ನನ್ನನ್ನು ಒಂದುಸಲವೂ ಭೆಟ್ಟಿಯಾಗುವುದಿಲ್ಲ. |
| राम कहता है कि उसकी वहिन वड़ी अक़्लमन्द है। | ರಾಮನು ಅವನ ಸಹೋದರಿಯು ಬಹು ಬುದ್ಧಿವಂತಳೆಂದು ಹೇಳುತ್ತಾನೆ. |
| उनका कहना है कि वाज़ार की किसी दूकान में यह चीज़ नहीं है। | ಪೇಟೆಯ ಯಾವ ಅಂಗಡಿಯಲ್ಲಿಯೂ ಈ ಪದಾರ್ಥವಿಲ್ಲವೆಂದು ಅವರು ಹೇಳುತ್ತಾರೆ. |
| वह वेवकूफ़ है, तो भी इस वात को अच्छी तरह समझता है। | ಅವನು ಮೂರ್ಖ, ಆದರೂ ಈ ವಿಷಯವನ್ನು ಚೆನ್ನಾಗಿ ತಿಳಿದುಕೊಳ್ಳುತ್ತಾನೆ. |
| अगर तुम अभी वहाँ जाओगे तो वे तुमसे ज़रूर मिलेंगे। | ನೀವು ಈಗಲೇ ಅಲ್ಲಿಗೆ ಹೋಗುವುದಾದರೆ ಅವರು ನಿಮಗೆ ಖಂಡಿತವಾಗಿ ಸಿಗುವರು. |
| मैं अपना पाठ रोज़ याद करता हूँ, इसलिए अध्यापकजी मुझे प्यार करते हैं। | ನಾನು ನಿತ್ಯವೂ ನನ್ನ ಪಾಠವನ್ನು ಗಟ್ಟಿ ಮಾಡುತ್ತೇನೆ, ಆದ್ದರಿಂದ ಉಪಾಧ್ಯಾಯರು ನನ್ನನ್ನು ಪ್ರೀತಿಸುತ್ತಾರೆ. |
| यह लड़का वड़ा सुस्त है, यह कभी अपना काम नहीं करता। | ಈ ಹುಡುಗನು ಬಹು ಸೋಮಾರಿ, ತನ್ನ ಕೆಲಸವನ್ನು ಎಂದೂ ಮಾಡುವುದಿಲ್ಲ. |

| | |
|---|---|
| यह कपड़ा बहुत उमदा है, तुम इसे अपने साथ रखो। | ಈ ಬಟ್ಟೆಯು ಬಹು ಶ್ರೇಷ್ಠವಾಗಿದೆ, ಇದನ್ನು ನಿಮ್ಮ ಹತ್ತಿರ ಇಟ್ಟುಕೊಳ್ಳಿ. |
| यह तस्वीर बड़ी ख़ूबसूरत है। | ಈ ಚಿತ್ರವು ಬಹು ಸುಂದರವಾಗಿದೆ. |
| तुम बड़ी सख्त बात कहते हो। | ನೀವು ಬಹು ಕಠಿಣವಾದ ಮಾತುಗಳನ್ನಾಡುತ್ತೀರಿ. |
| तुम इस छुट्टी में बेंगलोर जाओगे या मद्रास में रहोगे? | ನೀವು ಈ ರಜೆಯಲ್ಲಿ ಬೆಂಗಳೂರಿಗೆ ಹೋಗುತ್ತೀರೋ ಅಥವಾ ಮದ್ರಾಸಿನಲ್ಲಿರುತ್ತೀರೋ? |
| मैं कुछ दिन मद्रास में रहूँगा और कुछ दिनों के लिए ऊटी जाऊँगा। | ನಾನು ಕೆಲವುದಿನ ಮದ್ರಾಸಿನಲ್ಲಿರುವೆನು ಅನಂತರ ಕೆಲವುದಿನಗಳ ಮಟ್ಟಿಗೆ ಊಟಿಗೆ ಹೋಗುವೆನು. |
| वह आदमी देखने में बड़ा ख़ूबसूरत है, पर उसमें विद्या नहीं है। | ಆ ಮನುಷ್ಯನು ನೋಡುವುದಕ್ಕೆ ಬಹಳ ಚೆಲುವಾಗಿದ್ದಾನೆ, ಆದರೆ ಅವನಲ್ಲಿ ವಿದ್ಯೆಯಿಲ್ಲ. |
| मैं अक्सर अपने दोस्तों से मिलने वहाँ जाता हूँ। | ನಾನು ಆಗಾಗ್ಗೆ ನನ್ನ ಸ್ನೇಹಿತರನ್ನು ಕಾಣುವುದಕ್ಕಾಗಿ ಅಲ್ಲಿಗೆ ಹೋಗುತ್ತೇನೆ. |
| तुम मेरे आने तक वहाँ ठहरो। | ನಾನು ಬರುವವರೆಗೂ ನೀವು ಅಲ್ಲಿರಿ. |
| एक प्याला गरम चाय लाओ। | ಒಂದು ಕಪ್ ಬಿಸಿ ಚಹವನ್ನು ತೆಗೆದುಕೊಂಡು ಬಾ. |

---

## ಪಾಠ 13

### ಲಿಂಗ ಮತ್ತು ವಚನ

### ಲಿಂಗ

28. ಹಿಂದೀ ಭಾಷೆಯಲ್ಲಿ ಎರಡೇ ಲಿಂಗಗಳಿರುವುವು; ಪುಲ್ಲಿಂಗ ಮತ್ತು ಸ್ತ್ರೀಲಿಂಗ. ನಪುಂಸಕಲಿಂಗವಿಲ್ಲ. ಹಿಂದಿಯಲ್ಲಿ ಪುರುಷವಾಚಕ ಶಬ್ದಗಳು ಪುಲ್ಲಿಂಗವಾಗಿಯೂ, ಸ್ತ್ರೀವಾಚಕ ಶಬ್ದಗಳು ಸ್ತ್ರೀಲಿಂಗವಾಗಿಯೂ

ಇರುವುವು. ಕನ್ನಡದಲ್ಲಿ ನಪುಂಸಕಲಿಂಗವಾಗಿ ಉಪಯೋಗಿಸಲ್ಪಡುವ ಇತರ ಶಬ್ದಗಳು ರೂಢಿ ಮತ್ತು ವ್ಯವಹಾರಕ್ಕನುಸಾರವಾಗಿ ಹಿಂದಿಯಲ್ಲಿ ಪುಲ್ಲಿಂಗ ಅಥವಾ ಸ್ತ್ರೀಲಿಂಗದಂತೆ ಉಪಯೋಗಿಸಲ್ಪಡುವುವು.

29. ಹಿಂದಿಯಲ್ಲಿ ಯಾವಾಗಲೂ ಪುರುಷರ ಹೆಸರುಗಳು ಪುಲ್ಲಿಂಗಕ್ಕೆ ಸೇರಿದವುಗಳಾಗಿಯೂ ಸ್ತ್ರೀಯರ ಹೆಸರುಗಳು ಸ್ತ್ರೀಲಿಂಗಕ್ಕೆ ಸೇರಿದವುಗಳಾಗಿಯೂ ಇರುವುವು.

30. ಹಿಂದಿಯಲ್ಲಿ ಒಂದು ಶಬ್ದದ ಲಿಂಗವನ್ನು ನಿರ್ಣಯಿಸುವುದಕ್ಕೆ ಸ್ಥೂಲವಾಗಿ ಕೆಲವು ನಿಯಮಗಳನ್ನು ಸೂಚಿಸಬಹುದು. ಆದರೆ ಈ ನಿಯಮಗಳಿಗೆ ಅನೇಕ ಅಪವಾದ (exception) ಗಳಿವೆ. ಆದುದರಿಂದ ಭಾಷೆಯನ್ನು ಕಲಿಯುತ್ತಿರುವವರು ಸಂಶಯ ಬಂದಾಗ ನಾಮಪದಗಳ ಲಿಂಗವನ್ನು ನಿಘಂಟುವಿನಿಂದ ತಿಳಿಯಬಹುದು. ಪದವು ಯಾವುದಾದರೂ ವಾಕ್ಯದಲ್ಲಿದ್ದರೆ, ಅಂತಹ ಪದದ ವಿಶೇಷಣ ಅಥವಾ ಸಂಬಂಧಪಟ್ಟ ಕ್ರಿಯಾಪದದ ರೂಪದಿಂದಲೂ ಪದದ ಲಿಂಗವು ಗೊತ್ತಾಗುತ್ತದೆ.

ಹಿಂದೀ ಶಬ್ದಗಳ ಲಿಂಗವನ್ನು ನಿರ್ಣಯಿಸುವುದಕ್ಕೆ ಮುಂದೆ ಕೆಲವು ಸ್ಥೂಲ ನಿಯಮಗಳನ್ನು ಕೊಡಲಾಗುತ್ತದೆ.

(1) अ ಮತ್ತು आ ಕಾರಾಂತ ನಪುಂಸಕ ನಾಮಪದಗಳು ಸಾಮಾನ್ಯವಾಗಿ ಪುಲ್ಲಿಂಗವಾಗುತ್ತವೆ.

ಉದಾ :—फल, घर, कमरा, रास्ता ಇತ್ಯಾದಿ.

ಸೂಚನೆ :—ಈ ನಿಯಮಕ್ಕೆ ಅನೇಕ ಅಪವಾದಗಳಿವೆ. ಅಂಥವುಗಳನ್ನು ಈ ಪುಸ್ತಕದಲ್ಲಿ (ಸ್ತ್ರೀ) ಎಂಬಕ್ಷರದಿಂದ ಗುರುತಿಸಲಾಗಿದೆ.

(2) ದಿನ, ತಿಂಗಳು ಮತ್ತು ಪರ್ವತಗಳ ಹೆಸರುಗಳು ಪುಲ್ಲಿಂಗವಾಗುತ್ತವೆ.

(3) 'इ', 'ई' ಕಾರಾಂತ ನಪುಂಸಕ ಶಬ್ದಗಳು ಸಾಮಾನ್ಯವಾಗಿ ಸ್ತ್ರೀಲಿಂಗ ವರ್ಗಕ್ಕೆ ಸೇರುತ್ತವೆ.

ಉದಾ :—कुर्सी, घड़ी ಇತ್ಯಾದಿ.

ಆದರೆ पानी (ನೀರು), दही (ಮೊಸರು), मोती (ಮುತ್ತು), जी (ಮನಸ್ಸು), घी (ತುಪ್ಪ), ಇವುಗಳು ಈ ನಿಯಮಕ್ಕೆ ಅಪವಾದಗಳಾಗಿವೆ. ಇವುಗಳು ಪುಲ್ಲಿಂಗವಾಗಿ ಉಪಯೋಗಿಸಲ್ಪಡುತ್ತವೆ.

(4) ನದಿಗಳ ಮತ್ತು ಭಾಷೆಗಳ ಹೆಸರುಗಳು ಸ್ತ್ರೀಲಿಂಗವಾಗಿರುತ್ತವೆ.

ಉದಾ :—गंगा, यमुना, कृष्णा, कावेरी, हिन्दी, तमिल ।

ಅಪವಾದಗಳು—सिंधु, ब्रह्मपुत्रा ।

31. ನಪುಂಸಕ ಪದಗಳ ಲಿಂಗವು ಸರಿಯಾಗಿ ತಿಳಿಯದಿದ್ದಾಗ ಅವುಗಳನ್ನು ಪುಲ್ಲಿಂಗವಾಗಿ ಉಪಯೋಗಿಸುವುದು ಉತ್ತಮ.

## ವಚನ

32. ಹಿಂದಿಯಲ್ಲಿ ಕನ್ನಡದಲ್ಲಿರುವಂತೆ ಏಕವಚನ, ಬಹುವಚನಗಳೆಂದು ಎರಡೇ ವಚನಗಳಿರುವುವು.

33. ಶಬ್ದದ ಬಹುವಚನರೂಪವನ್ನು ಹೊಂದಲು ನಿಯಮಗಳು ಕೆಳಗೆ ಕೊಡಲಾಗುತ್ತವೆ.

(1) आ ಕಾರಾಂತವಲ್ಲದ ಪುಲ್ಲಿಂಗ ಪದಗಳು ಬಹುವಚನದಲ್ಲಿ ರೂಪಭೇದವನ್ನು ಹೊಂದುವುದಿಲ್ಲ.

ಉದಾ :—घर ಮನೆ ಅಥವಾ ಮನೆಗಳು.

ಸೂಚನೆ :—ಇಂಥಾ ಸಂದರ್ಭಗಳಲ್ಲಿ ಪದಕ್ಕೆ ಸಂಬಂಧಿಸಿದ ವಿಶೇಷಣದ ರೂಪದಿಂದಾಗಲಿ ಕ್ರಿಯಾಪದದಿಂದಾಗಲಿ ನಾಮಪದದ ವಚನವನ್ನು ತಿಳಿಯಬೇಕು.

(2) आ ಕಾರಾಂತ ಪುಲ್ಲಿಂಗ ಪದಗಳ ಬಹುವಚನದಲ್ಲಿ ಅಂತ್ಯದ आ ಕಾರವು ए ಕಾರವಾಗುವುದು.

ಉದಾ :—लड़का - लड़के ; घोड़ा - घोड़े ।

(3) ಅಂತ್ಯದಲ್ಲಿ 'अ' ಕಾರವುಳ್ಳ ಸ್ತ್ರೀಲಿಂಗ ಪದಗಳ ಬಹುವಚನವು 'अ' ಕಾರವನ್ನು 'एँ' ಕಾರಕ್ಕೆ ಬದಲಾಯಿಸುವುದರಿಂದಾಗುತ್ತದೆ.

ಉದಾ :—**पुस्तक - पुस्तकें, आँख - आँखें ।**

(4) इ, ई ಕಾರಾಂತ ಸ್ತ್ರೀಲಿಂಗ ಪದಗಳ ಬಹುವಚನವು **याँ** ಪ್ರತ್ಯಯವನ್ನು ಸೇರಿಸುವುದರಿಂದ ಬಹುವಚನಗಳಾಗುತ್ತವೆ.

ಉದಾ :—**तिथि** (ತಾರೀಖು) **तिथियाँ, लड़की लड़कियाँ ।**

(5) ಇತರ ಸ್ವರಾಂತ ಸ್ತ್ರೀಲಿಂಗ ಪದಗಳಿಗೆ ಬಹುವಚನದಲ್ಲಿ 'एँ' ಅಥವಾ 'यँ' ಪ್ರತ್ಯಯುಗಳು ಸೇರುವುವು.

ಉದಾ :—**माता - मातायें** ಅಥವಾ **माताएँ, वस्तु - वस्तुएँ ।**

ಸೂಚನೆ :—ई ಮತ್ತು ऊ ಕಾರಾಂತ ಸ್ತ್ರೀಲಿಂಗ ಪದಗಳ ಅಂತ್ಯ ಸ್ವರಗಳು ಬಹುವಚನ ಪ್ರತ್ಯಯುಗಳು ಸೇರುವುದಕ್ಕೆ ಮುಂಚೆ ಹ್ರಸ್ವವಾಗುತ್ತವೆ.

ಉದಾ :—**लड़की - लड़कियाँ ।**

34. (1) ಬಹುವಚನದಲ್ಲಿ ಪುಲ್ಲಿಂಗ ಮತ್ತು ಸ್ತ್ರೀಲಿಂಗ ನಾಮಪದಗಳ ಮುಂದೆ ವಿಭಕ್ತಿ ಪ್ರತ್ಯಯುವು ಬಂದಿರುವಾಗ ವಿಭಕ್ತಿ ಪ್ರತ್ಯಯಕ್ಕೂ, ನಾಮ ಪದಕ್ಕೂ ಮಧ್ಯೆ **ओं** ಎಂಬ ಪ್ರತ್ಯಯುವು ಬರುತ್ತದೆ. ಆಗ ಮೇಲಿನ ನಿಯಮಗಳು ಅನ್ವಯಿಸುವುದಿಲ್ಲ.

ಉದಾ :—**घर - घरों में । लड़का - लड़कों के । पुस्तक - पुस्तकों से ।**
**कमरा - कमरों में । आँख - आँखों पर ।**

ಸೂಚನೆ :—'इ' ಮತ್ತು 'ई' ಕಾರಾಂತವುಳ್ಳ ನಾಮಪದಗಳಿಗೆ ಬಹುವಚನಗಳಲ್ಲಿ ವಿಭಕ್ತಿ ಪ್ರತ್ಯಯುಗಳು ಸೇರಿದರೆ **ओं** ವಿನ ಬದಲು **यों** ಸೇರಿಸಬೇಕು.

ಉದಾ :—**स्त्री - स्त्रियों से ; कुर्सी - कुर्सियों पर ।**

(2) ನಾಮವಾಚಕಗಳಿಗೆ 'ಓ' ಸೇರಿಸಿದಲ್ಲಿ ಸಂಬೋಧನಾತ್ಮಕ ಬಹುವಚನವಾಗುವುದು.

ಉದಾ :—हे बालको ! ऐ लड़को ! ओ स्त्रियो !

(3) हम, तुम, आप, ये ಮತ್ತು वे ಈ ಸರ್ವನಾಮಗಳನ್ನು ಸಾಧಾರಣವಾಗಿ ಏಕವಚನದಲ್ಲಿ ಉಪಯೋಗಿಸುವುದುಂಟು. ಇವುಗಳನ್ನೇ ಬಹುವಚನದ ಅರ್ಥದಲ್ಲಿ ಉಪಯೋಗಿಸಬೇಕಾದರೆ ಈ ಸರ್ವನಾಮಗಳ ಮುಂದೆ लोग ಎಂಬ ಪದವನ್ನು ಸೇರಿಸಿ ಉಪಯೋಗಿಸಬೇಕು.

ಉದಾ :—हम लोग ನಾವುಗಳು    तुम लोग ನೀವುಗಳು
आप लोग ತಾವುಗಳು    वे लोग ಅವರುಗಳು ಇತ್ಯಾದಿ

---

## ಪಾಠ 14

| | |
|---|---|
| वर्ष, साल ವರ್ಷ, ಸಂವತ್ಸರ | महीना, मास ತಿಂಗಳು |
| जगह ಸ್ಥಳ | किनारा ದಂಡೆ, ತೀರ, ದಡ |
| बिजली ವಿದ್ಯುತ್, ಮಿಂಚು | बिजली की गाड़ी ಟ್ರಾಮ್‌ಗಾಡಿ |
| किराया ಬಾಡಿಗೆ | अकेले ಒಂಟಿಗ |
| बढ़िया ಉತ್ತಮ | कम से कम ಕಡೇಪಕ್ಷ, ಕನಿಷ್ಠಪಕ್ಷ |
| होकर ಮಾರ್ಗವಾಗಿ (via) | लग ತಗಲು * |
| लायक़ ಯೋಗ್ಯ | ठहर ನಿಲ್ಲು, ಇಳಿದುಕೊಳ್ಳು |
| खोल ತೆರೆ | रवाना हो ಹೊರಡು |
| पहुँच ಸೇರು | बजा ವಾದ್ಯವನ್ನು ಬಾರಿಸು |
| बाजा ವಾದ್ಯ | निकल ಹೊರಡು |

* "लग" ಎಂಬುದರ ಪ್ರಯೋಗವನ್ನು 29 ನೇ ಪಾಠದಲ್ಲಿ ನೋಡಿರಿ.

गंगा हिमालय से निकलती है।
ಗಂಗೆಯು ಹಿಮಾಲಯದಿಂದ ಹೊರಡುತ್ತದೆ.

मैं रोज़ गाय का दही खाता हूँ।
ನಾನು ಪ್ರತಿದಿನವೂ ಹಸುವಿನ ಮೊಸರನ್ನು ತಿನ್ನುತ್ತೇನೆ.

मेरे मामा के दो लड़के बंबई में रहते हैं।
ನನ್ನ ಮಾವನ ಇಬ್ಬರು ಮಕ್ಕಳು ಬೊಂಬಾಯಿಯಲ್ಲಿ ವಾಸಿಸುತ್ತಾರೆ.

उसकी आँखें बड़ी सुंदर हैं।
ಅದರ ಕಣ್ಣುಗಳು ಬಹಳ ಅಂದವಾಗಿವೆ.

हमारे क्लास में दस लड़कियाँ हिन्दी सीखती हैं।
ನಮ್ಮ ತರಗತಿಯಲ್ಲಿ ಹತ್ತುಮಂದಿ ಹುಡುಗಿಯರು ಹಿಂದಿಯನ್ನು ಕಲಿಯುತ್ತಾರೆ.

मुझे सब लड़कियों के नाम याद है।
ನನಗೆ ಎಲ್ಲಾ ಹುಡುಗಿಯರ ಹೆಸರುಗಳು ಗೊತ್ತು (ನೆನಪಿದೆ).

आजकल आप कहाँ रहते हैं?
ಇತ್ತೀಚೆಗೆ ತಾವು ಎಲ್ಲಿ ವಾಸಿಸುತ್ತೀರಿ?

मैं दो वर्ष से काशी में रहता हूँ।
ನಾನು ಎರಡು ವರ್ಷಗಳಿಂದ ಕಾಶಿಯಲ್ಲಿ ವಾಸಿಸುತ್ತಿದ್ದೇನೆ.

काशी कैसी जगह है?
ಕಾಶಿಯು ಎಂತಹ ಸ್ಥಳ.

काशी गंगा नदी के किनारे पर एक बहुत बढ़िया शहर है।
ಕಾಶಿಯು ಗಂಗಾತೀರದ ಮೇಲಿರುವ ಒಂದು ಅತ್ಯುತ್ತಮವಾದ ಪಟ್ಟಣ.

यहाँ से काशी जाने का रास्ता किधर से है?
ಇಲ್ಲಿಂದ ಕಾಶಿಗೆ ಹೋಗುವ ರಸ್ತೆಯು ಯಾವ ಕಡೆಯಿಂದ ಹೋಗುತ್ತದೆ.

यहाँ से कलकत्ता होकर हम वहाँ जाते हैं।
ಇಲ್ಲಿಂದ ಕಲಕತ್ತೆಯ ಮುಖಾಂತರ (ಮಾರ್ಗವಾಗಿ) ನಾವು ಅಲ್ಲಿಗೆ ಹೋಗುತ್ತೇವೆ.

वहाँ पहुँचने में कितने दिन लगते हैं और वहाँ तक का किराया क्या है?
ಅಲ್ಲಿಗೆ ತಲುಪುವುದಕ್ಕೆ ಎಷ್ಟು ದಿನಗಳು ಹಿಡಿಯುತ್ತವೆ ಮತ್ತು ಅಲ್ಲಿಯವರೆಗಿನ ಚಾರ್ಜು ಏನು?

| | |
|---|---|
| यहाँ से काशी पहुँचने में तीन दिन लगते हैं और मद्रास से वहाँ तक का किराया क़रीव चालीस रुपया है। | ಇಲ್ಲಿಂದ ಕಾಶಿಗೆ ತಲುಪಲು, ಮೂರು ದಿನಗಳು ಹಿಡಿಯುತ್ತವೆ ಮತ್ತು ಮದ್ರಾಸಿನಿಂದ ಅಲ್ಲಿವರೆಗಿನ ಚಾರ್ಜು ಸುಮಾರು ನಲವತ್ತು ರೂಪಾಯಿ. |
| आप फिर काशी के लिए कव रवाना होंगे? | ತಾವು ಕಾಶಿಗೆ (ಪುನಃ) ಯಾವಾಗ ಹೊರಡುವಿರಿ? |
| मैं दस दिन में रवाना होऊँगा। | ನಾನು ಹತ್ತು ದಿನಗಳೊಳಗೆ ಹೊರಡುವೆನು. |
| अच्छा, इस वार मैं भी आपके साथ चलूँगा, मैं काशी में कुछ दिन रहना चाहता हूँ। | ಒಳ್ಳೆಯದು, ಈಬಾರಿ ನಾನೂ ತಮ್ಮೊಡನೆ ಬರುವೆನು, ನಾನು ಕಾಶಿಯಲ್ಲಿ ಕೆಲವುದಿನ ಇರಲು ಅಪೇಕ್ಷೆಪಡುತ್ತೇನೆ (ಬಯಸುತ್ತೇನೆ). |
| तुम अकेले चलोगे या तुम्हारे साथ तुम्हारी माँ और वाप भी आएँगे? | ನೀವು ಒಬ್ಬರೇ ಬರುವಿರೋ ಅಥವಾ ನಿಮ್ಮ ಸಂಗಡ ನಿಮ್ಮ ತಾಯಿ ಮತ್ತು ತಂದೆಯವರೂ ಬರುವರೋ? |
| पिताजी के वारे में मैं नहीं जानता; लेकिन माँ ज़रूर मेरे साथ आएँगी, मैं अकेले वहाँ नहीं जाना चाहता। | ತಂದೆಯವರ ವಿಷಯ ನನಗೆ ಗೊತ್ತಿಲ್ಲ, ಆದರೆ (ನನ್ನ) ತಾಯಿಯು ಅಗತ್ಯವಾಗಿ ನಮ್ಮೊಂದಿಗೆ ಬರುವರು, ನಾನು ಒಬ್ಬನೇ ಅಲ್ಲಿಗೆ ಹೋಗಲು ಇಷ್ಟಪಡುವುದಿಲ್ಲ. |
| तुम काशी में कितने दिन ठहरोगे? | ನೀವು ಕಾಶಿಯಲ್ಲಿ ಎಷ್ಟುದಿನ ನಿಲ್ಲುವಿರಿ? |
| अभी कुछ ठीक नहीं है, लेकिन कम से कम दो महीने मैं वहाँ ज़रूर ठहरूँगा। | ಇನ್ನೂ ಏನೂ ಖಂಡಿತವಿಲ್ಲ, ಆದರೆ ಕಡೇ ಪಕ್ಷ ಎರಡು ತಿಂಗಳಾದರೂ ಅಲ್ಲಿ ನಿಲ್ಲಬೇಕೆಂದು ಯೋಚಿಸುತ್ತಿದ್ದೇನೆ. |
| काशी में और उसके नज़दीक क्या-क्या चीज़ें और जगहें देखने लायक़ हैं? | ಕಾಶಿಯಲ್ಲಿ ಮತ್ತು ಅದರ ಹತ್ತಿರ ಯಾವ ಯಾವ ವಸ್ತುಗಳು ಮತ್ತು ಸ್ಥಳಗಳು ನೋಡತಕ್ಕವಾಗಿವೆ? |

| | |
|---|---|
| काशी में विश्वनाथजी का मंदिर, हिन्दू-विश्वविद्यालय और गंगा का किनारा देखने लायक़ हैं। | ಕಾಶಿಯಲ್ಲಿ ವಿಶ್ವನಾಥ ಸ್ವಾಮಿಯ ದೇವಾಲಯ, ಹಿಂದೂ ವಿಶ್ವವಿದ್ಯಾಲಯ ಮತ್ತು ಗಂಗಾ ನದಿಯತೀರ (ಇವು) ನೋಡಲು ಯೋಗ್ಯವಾಗಿವೆ. |
| काशी से थोड़ी दूर पर सारनाथ का मंदिर है। | ಕಾಶಿಯಿಂದ ಸ್ವಲ್ಪ ದೂರದಲ್ಲಿ ಸಾರನಾಥನ ದೇವಾಲಯವಿದೆ. |
| क्या काशी में बिजली की गाड़ियाँ भी हैं? | ಕಾಶಿಯಲ್ಲಿ ಟ್ರಾಮ್ ಗಾಡಿಗಳೂ ಇವೆಯೇನು? |
| नहीं, वहाँ बिजली की गाड़ियाँ नहीं हैं, लेकिन घोड़ा-गाड़ियाँ मिलती हैं। | ಇಲ್ಲ, ಅಲ್ಲಿ ಟ್ರಾಮ್ ಗಾಡಿಗಳಿಲ್ಲ, ಆದರೆ ಕುದುರೆ ಗಾಡಿಗಳು ಸಿಗುತ್ತವೆ. |
| रघुनाथराव की दो लड़कियाँ काशी में संस्कृत और अंग्रेज़ी पढ़ती हैं। | ರಘುನಾಥರಾಯರ ಇಬ್ಬರು ಹುಡುಗಿಯರು ಕಾಶಿಯಲ್ಲಿ ಸಂಸ್ಕೃತ ಮತ್ತು ಇಂಗ್ಲೀಷ್ ಓದುತ್ತಿದ್ದಾರೆ. |
| लड़कियों के पिता भी वहीं रहते हैं। | ಹುಡುಗಿಯರ ತಂದೆಯೂ ಕೂಡ ಅಲ್ಲಿಯೇ ವಾಸಿಸುತ್ತಾರೆ. |
| वे लोग गंगा के किनारे एक बड़े सुन्दर मकान में रहते हैं। | ಅವರುಗಳು ಗಂಗಾನದಿಯ ದಡದಲ್ಲಿ ಒಂದು ಬಹು ಸುಂದರವಾದ ಮನೆಯಲ್ಲಿ ವಾಸಿಸುತ್ತಾರೆ. |
| वे दो महीने में मद्रास आएँगे। | ಅವರು ಎರಡು ತಿಂಗಳುಗಳಲ್ಲಿ ಮದ್ರಾಸಿಗೆ ಬರುವರು. |
| कौन बाजा बजा रहा है? | ಯಾರು ವಾದ್ಯವನ್ನು ಬಾರಿಸುತ್ತಾ ಇದ್ದಾರೆ. |

## ಪಾಠ 15

### ಭೂತಕಾಲ

35. ಕ್ರಿಯಾಪದದ ಮೂಲಧಾತುವಿಗೆ **आ** ಅಥವಾ **या** ಪ್ರತ್ಯಯವನ್ನು ಸೇರಿಸುವುದರಿಂದ ಭೂತಕಾಲ ರೂಪವಾಗುವುದು.

(1) '**अ**' ಕಾರಾಂತ ಧಾತುವಿನ ಕೊನೆಯ '**अ**' ಎಂಬ ಸ್ವರವನ್ನು '**आ**' ಎಂದು ಮಾಡಿದರೆ ಭೂತಕಾಲ ರೂಪವಾಗುತ್ತದೆ.

ಉದಾ :—**बोल-बोला, पढ़-पढ़ा, पहचान-पहचाना ।**

(2) **आ, ए** ಅಥವಾ **ओ** ಕಾರಾಂತ ಧಾತುಗಳಮುಂದೆ **या** ಪ್ರತ್ಯಯವನ್ನು ಸೇರಿಸಿದರೆ ಭೂತಕಾಲ ರೂಪವಾಗುತ್ತದೆ.

ಉದಾ :—**सो-सोया, ला-लाया, धो-धोया ।**

(3) ಮೂಲಧಾತುವು **ई** ಕಾರಾಂತ್ಯವಾಗಿದ್ದರೆ **ई** ಯು **या** ಪ್ರತ್ಯಯದ ಹಿಂದೆ ಹ್ರಸ್ವವಾಗುವುದು.

ಉದಾ :—**पी-पिया, जी-जिया ।** ಈ ನಿಯಮಗಳು ಮುಂದಿನ ಧಾತುಗಳಿಗೆ ಮಾತ್ರ ಅನ್ವಯಿಸುವುದಿಲ್ಲ. **दे-दिया, ले-लिया, जा-गया, कर-किया, हो** (ಆಗು, ಇರು) **हुआ, छू-**(ಮುಟ್ಟು) **छुआ ।**

36. ಕ್ರಿಯಾಪದಗಳ ಪುಲ್ಲಿಂಗ ಬಹುವಚನರೂಪವೂ ಸ್ತ್ರೀಲಿಂಗ ಏಕವಚನರೂಪವೂ **आ, ए, ई** ನಿಯಮವನ್ನನುಸರಿಸಿ ಭೂತಕಾಲದ ರೂಪಗಳನ್ನು ಹೊಂದುವುವು.

ಉದಾ :—**पढ़ा-पढ़े-पढ़ी, खाया-खाये-खायी, गया-गये-गयी, सोया-सोये-सोयी** ಇತ್ಯಾದಿ.

**पिया, दिया, लिया, किया** ಎಂಬವುಗಳ ಸ್ತ್ರೀಲಿಂಗ ರೂಪಗಳು ಅನುಕ್ರಮವಾಗಿ **पी, दी, ली, की** ಎಂಬವುಗಳು.

ಸ್ತ್ರೀಲಿಂಗದ ಏಕವಚನ ರೂಪಕ್ಕೆ ಅನುಸ್ವಾರವನ್ನು ಸೇರಿಸುವುದರಿಂದ ಸ್ತ್ರೀಲಿಂಗದ ಬಹುವಚನ ರೂಪವಾಗುವುದು.

ಉದಾ :—खायीं, गयीं, सोयीं, पीं, दीं, लीं, कीं ಇತ್ಯಾದಿ.

37. ಅಕರ್ಮಕ ಕ್ರಿಯಾಪದವು ತನ್ನ ಕರ್ತೃವಿನ ಲಿಂಗ ವಚನಗಳನ್ನು ಅನುಸರಿಸುವುದು.

ಉದಾ :—मैं सोया, हम सोये, कृष्ण सोया, राधा सोयी ।

ಸೂಚನೆ :—ला ತರು, बोल ಮಾತಾಡು, भूल ಮರಿ—ಎಂಬವುಗಳನ್ನು ಹಿಂದಿಯಲ್ಲಿ ಅಕರ್ಮಕ ಕ್ರಿಯಾಪದಗಳಂತೆ ಪ್ರಯೋಗಿಸುವರು.

ಉದಾ :—मैं लाया ನಾನು ತಂದೆನು, वह बोली ಅವಳು ಮಾತನಾಡಿದಳು, तुम भूले ನೀವು ಮರೆತಿರಿ, सीता लायी ಸೀತೆಯು ತಂದಳು.

38. ಭೂತಕಾಲಿಕ ಸಕರ್ಮಕ ಕ್ರಿಯಾಪದದ ಕರ್ತೃವಿನ ಮುಂದೆ ಯಾವಾಗಲೂ ने ಪ್ರತ್ಯಯವು ಬರುತ್ತದೆ.

ಉದಾ :—राम ने खाया, मैंने देखा, उसने सुना, किसने यह किया ।

39. ಸಕರ್ಮಕ ಕ್ರಿಯಾಪದದ ಲಿಂಗವಚನಗಳು ಭೂತಕಾಲದಲ್ಲಿ ಕರ್ತೃವಿನ ಲಿಂಗವಚನಗಳನ್ನು ಅನುಸರಿಸುವುದಿಲ್ಲ; ಕರ್ಮಪದವು ಸ್ಪಷ್ಟವಾಗಿದ್ದು ಅದರೊಡನೆ को ಎಂಬ ಪ್ರತ್ಯಯವು ಇಲ್ಲದಿದ್ದರೆ ಕ್ರಿಯೆಯ ಲಿಂಗವಚನಗಳು ಕರ್ಮಪದವನ್ನು ಅನುಸರಿಸುತ್ತವೆ.

ಉದಾ :—मैंने एक घोड़ा देखा ನಾನು ಒಂದು ಕುದುರೆಯನ್ನು ನೋಡಿದೆ.

मैंने दस घोड़े देखे ನಾನು ಹತ್ತು ಕುದುರೆಗಳನ್ನು ನೋಡಿದೆನು.

मैंने एक घोड़ी देखी ನಾನು ಒಂದು ಹೆಣ್ಣು ಕುದುರೆಯನ್ನು ನೋಡಿದೆನು.

मैंने दस घोड़ियाँ देखीं ನಾನು ಹತ್ತು ಹೆಣ್ಣು ಕುದುರೆಗಳನ್ನು ನೋಡಿದೆನು.

ಕರ್ಮಪದವು ಅಧ್ಯಾಹೃತ (understood) ವಾಗಿದ್ದರೆ ಅಥವಾ ಅದಕ್ಕೆ **को** ಎಂಬ ವಿಭಕ್ತಿ ಪ್ರತ್ಯಯವು ಸೇರಿದ್ದರೆ ಸಕರ್ಮಕ ಕ್ರಿಯೆಯು ಕರ್ತೃ ಅಥವಾ ಕರ್ಮಪದದ ಲಿಂಗವಚನಗಳನ್ನನುಸರಿಸುವುದಿಲ್ಲ. ಆಗ ಅದು ಪ್ರಥಮಪುರುಷದ ಪುಲ್ಲಿಂಗ ಏಕವಚನದ ರೂಪವನ್ನು ತಾಳುತ್ತದೆ.

ಉದಾ:—**मैंने देखा, हमने देखा, आपने देखा, उसने देखा, सीता ने देखा, मैंने उस स्त्री को देखा, उसने मेरी बहन को देखा।**

40. **वे, ये** ಮತ್ತು (ಬಹುವಚನದಲ್ಲಿ ಬರುವ) **कौन, जो** ಎಂಬವುಗಳಿಗೆ **ने** ಪ್ರತ್ಯಯುವನ್ನು ಸೇರಿಸಿದಾಗ ಅವುಗಳು ಅನುಕ್ರಮವಾಗಿ ಮುಂದೆ ಹೇಳುವ ರೂಪಗಳನ್ನು ಹೊಂದುತ್ತವೆ.

ಉದಾ:—**उन्होंने, इन्होंने, किन्होंने, जिन्होंने**

**उन्होंने आपसे क्या कहा?** ಅವರು ನಿಮ್ಮೊಂದಿಗೆ ಏನು ಹೇಳಿದರು?

**यह काम किन्होंने किया?** ಈ ಕೆಲಸವನ್ನು ಯಾರು ಮಾಡಿದರು?

**इन्होंने बहुत ठीक कहा** ಇವರು ಬಹು ಯೋಗ್ಯವಾಗಿ ಹೇಳಿದರು.

| | |
|---|---|
| **रवाना होना** ಹೊರಡುವದು | **रवाना हो** ಹೊರಡು (ಅಕರ್ಮಕ)<br>**रवाना कर** ಹೊರಡಿಸು (ಸಕರ್ಮಕ) |
| **शुरू** ಪ್ರಾರಂಭ | **शुरू हो** ಪ್ರಾರಂಭವಾಗು (ಅಕ.)<br>**शुरू कर** ಪ್ರಾರಂಭಿಸು (ಸಕ.) |
| **ख़तम** ಕೊನೆ, ಅಂತ್ಯ | **ख़तम हो** ಮುಗಿ, ಕೊನೆಗಾಣು (ಅಕ.)<br>**ख़तम कर** ಮುಗಿಸು, ಕೊನೆಗಾಣಿಸು (ಸಕ.) |
| **पूरा** ಸಂಪೂರ್ಣ | **पूरा हो** ಪೂರ್ಣವಾಗು (ಅಕ.)<br>**पूरा कर** ಪೂರ್ತಿಮಾಡು, ಪೂರ್ಣಗೊಳಿಸು (ಸಕ.) |

| | |
|---|---|
| कोशिश ಪ್ರಯತ್ನ, ಯತ್ನ (ಸ್ತ್ರೀ) | कोशिश कर ಪ್ರಯತ್ನಿಸು |
| आशा ಭರವಸೆ, ಆಸೆ (ಸ್ತ್ರೀ) | आशा कर ಭರವಸೆ ಇಟ್ಟುಕೊ |
| मदद ಸಹಾಯ (ಸ್ತ್ರೀ) | मदद कर ಸಹಾಯಮಾಡು |
| माफ़ी ಕ್ಷಮೆ | माफ़ कर ಕ್ಷಮಿಸು |
| देर ತಡ, ಹೊತ್ತು (ಸ್ತ್ರೀ) | देर कर ತಡಮಾಡು |
| खुश ಸಂತೋಷವಾಗಿ | खुश हो ಸಂತೋಷಪಡು |
| पकड़ ಹಿಡಿ | बना ಮಾಡು |
| था (थी ಸ್ತ್ರೀ) ಇದ್ದನು, ಇದ್ದಿತು | थे (थीं ಸ್ತ್ರೀ) ಇದ್ದರು, ಇದ್ದವು |
| सभा (ಸ್ತ್ರೀ) ಸಭೆ, ಸಂಘ | अदालत (ಸ್ತ್ರೀ) ನ್ಯಾಯಸ್ಥಾನ |
| इनाम ಬಹುಮಾನ, ಪಾರಿತೋಷಿಕ | लाभ ಲಾಭ, ಪ್ರಯೋಜನ |
| समझ (ಸ್ತ್ರೀ) ತಿಳುವಳಿಕೆ | लेख ಲೇಖನ, ಬರವಣಿಗೆ |
| शायद ಬಹುಶಃ, ಪ್ರಾಯಶಃ | सवेरा ಪ್ರಾತಃಕಾಲ |

कभी ಯಾವಾಗಲೂ, ಎಂದಿಗೂ

| | |
|---|---|
| आज तुमने क्या खाया ? | ಇವತ್ತು ನೀನು ಏನು ಊಟಮಾಡಿದೆ? |
| मैंने आज भात खाया। | ನಾನು ಇವತ್ತು ಅನ್ನ ಊಟಮಾಡಿದೆ? |
| तुमने रोटी क्यों नहीं खायी? | ನೀನೇಕೆ ಈದಿನ ರೊಟ್ಟಿ ತಿನ್ನಲಿಲ್ಲ? |
| अम्मा ने घर में आज रोटियाँ नहीं बनायीं। | ಅಮ್ಮನು (ತಾಯಿಯು) ಮನೆಯಲ್ಲಿ ಈ ದಿನ ರೊಟ್ಟಿ ಮಾಡಲಿಲ್ಲ? |
| तुम इतनी देर से क्यों आये? | ನೀನು ಅದೇಕೆ ಇಷ್ಟು ತಡಮಾಡಿಬಂದೆ? |
| कल कृष्ण कहाँ थे, वे दफ़्तर क्यों नहीं आये? | ನಿನ್ನೆ ಕೃಷ್ಣರವರು ಎಲ್ಲಿದ್ದರು, ಅವರು ಆಫೀಸಿಗೆ ಏಕೆ ಬರಲಿಲ್ಲ? |
| कल उनकी तवीयत ठीक नहीं थी, इसलिए वे दफ़्तर नहीं गये। | ನಿನ್ನೆ ಅವರ ದೇಹಸ್ಥಿತಿಯು ಚೆನ್ನಾಗಿರಲಿಲ್ಲ. ಅದಕ್ಕೋಸ್ಕರ ಅವರು ಆಫೀಸಿಗೆ ಬರಲಿಲ್ಲ. |

| | |
|---|---|
| आज मैं एक सभा में गया और वहाँ से लौटने में देर हुई; माफ़ कीजिये। | ಇವತ್ತು ನಾನು ಒಂದು ಸಭೆಗೆ ಹೋಗಿದ್ದೆ, ಅಲ್ಲಿಂದ ಹಿಂತಿರುಗುವುದರೊಳಗೆ ತಡವಾಯಿತು; ಕ್ಷಮಿಸಿರಿ. |
| आज पाँच बजे की गाड़ी से आपके भाई के दोस्त यहाँ आये, लेकिन आपके भाई अभी तक अदालत से नहीं लौटे। | ಈ ದಿನ ಐದು ಗಂಟೆಯ ಗಾಡಿಯಲ್ಲಿ ನಿಮ್ಮ ಅಣ್ಣನ ಮಿತ್ರರು ಇಲ್ಲಿಗೆ ಬಂದರು, ಆದರೆ ನಿಮ್ಮ ಅಣ್ಣನು ಇದುವರೆಗೆ ಕೋರ್ಟಿನಿಂದ ಹಿಂತಿರುಗಲಿಲ್ಲ. |
| जब मैंने उनको उनके दोस्त के आने की ख़बर दी तब उन्होंने कहा, "चलो, मैं थोड़ी देर में आऊँगा।" | ನಾನು ಅವರಿಗೆ ಅವರ ಸ್ನೇಹಿತರ ಬರುವಿಕೆಯ ಸಮಾಚಾರವನ್ನು ಕೊಟ್ಟಾಗ ಅವರು "ನಡಿ, ಸ್ವಲ್ಪ ಹೊತ್ತಿನಲ್ಲಿಯೇ ನಾನು ಬರುವೆನು" ಎಂದು ಹೇಳಿದರು. |
| जिन्होंने यह लेख लिखा उन्होंने पचास रुपये इनाम पाये। | ಈ ನಿಬಂಧವನ್ನು ಯಾರು ಬರೆದರೋ ಅವರು ಐವತ್ತು ರೂಪಾಯಿ ಇನಾಮನ್ನು ಪಡೆದರು. |
| मैं कल मैसूर में आपकी बहिन से मिला; उन्होंने कहा कि वे कल सबेरे यहाँ आएँगी। | ನಿನ್ನೆ ಮೈಸೂರಿನಲ್ಲಿ ನಿಮ್ಮ ಸಹೋದರಿಯನ್ನು ಭೆಟ್ಟಿಯಾದೆನು, ಅವರು ನಾಳೆ ಬೆಳಿಗ್ಗೆ ಅಲ್ಲಿಗೆ ಬರುತ್ತೇನೆಂದು ಹೇಳಿದರು. |
| उनकी समझ में यह बात ज़रा भी नहीं आयी कि यह काम कैसे हुआ। | ಈ ಕೆಲಸವು ಹೇಗೆ ಆಯಿತೆಂದು ಅವರಿಗೆ ಸ್ವಲ್ಪವಾದರೂ ಗೊತ್ತಾಗಲಿಲ್ಲ. |
| जब सूरज निकला तब मैं रवाना हुआ, इसलिए आपके यहाँ बड़ी देर से पहुँचा। | ಸೂರ್ಯನು ಉದಯಿಸಿದಾಗ ನಾನು ಹೊರಟೆ, ಆದ್ದರಿಂದ ನಿಮ್ಮಲ್ಲಿಗೆ ಬಹಳ ತಡವಾಗಿ ತಲುಪಿದೆ. |

| | |
|---|---|
| उन्होंने कल जो काम शुरू किया वह अभी तक ख़तम नहीं हुआ। मैं आशा करता हूँ कि वह अब जल्दी पूरा होगा। | ನಿನ್ನೆ ಅವರು ಪ್ರಾರಂಭಿಸಿದ ಕೆಲಸವು ಇನ್ನೂ ಮುಗಿಯಲಿಲ್ಲ. ಅದು ಈಗ ಬೇಗನೆ ಪೂರೈಸೀತೆಂದು ನಾನು ಆಶಿಸುತ್ತೇನೆ. |
| पुलिस ने उसे पकड़ने की बहुत कोशिश की, पर कोई लाभ नहीं हुआ। | ಪೋಲೀಸಿನವರು ಅವನನ್ನು ಹಿಡಿಯಲು ಬಹಳ ಪ್ರಯತ್ನಿಸಿದರು, ಆದರೆ ಏನೂ ಪ್ರಯೋಜನವಾಗಲಿಲ್ಲ. |
| जिस समय कलकत्ते की गाड़ी रवाना हुई उस समय मैं स्टेशन पर था। | ಕಲ್ಕತ್ತಾ ಗಾಡಿಯು ಹೊರಟಾಗ ನಾನು ನಿಲ್ದಾಣ (ಸ್ಟೇಷನ್ನಿನಲ್ಲಿ) ದಲ್ಲಿ ಇದ್ದೆ. |
| जिस काम को तुमने शुरू किया उसे ज़रूर पूरा करो। | ಯಾವ ಕೆಲಸವನ್ನು ನೀನು ಪ್ರಾರಂಭಿಸಿದೆಯೋ ಅದನ್ನು ಅಗತ್ಯವಾಗಿ ಪೂರೈಸು. |
| जब हमने श्री वसन्ती देवी के यहाँ आने की ख़बर सुनी, तब हम बहुत खुश हुए। | ಶ್ರೀ ವಸಂತೀದೇವಿಯವರು ಇಲ್ಲಿಗೆ ಬರುವ ಸಮಾಚಾರವನ್ನು ಕೇಳಿದಾಗ ನಾವು ಪರಮಾನಂದಪಟ್ಟೆವು. |

## ಪಾಠ 16

### ಭೂತಕಾಲ (ಮುಂದುವರಿದುದು)

**41.** ಆಸನ್ನಭೂತ, ಪೂರ್ಣಭೂತ ಮತ್ತು ಸಂದಿಗ್ಧ ಭೂತಕಾಲದ ರೂಪಗಳು ಭೂತಕಾಲದ ರೂಪದಿಂದಲೇ ಹುಟ್ಟುವುವು. ಆದುದರಿಂದ ಧಾತುಗಳ ಭೂತರೂಪಕ್ಕೆ ಅನ್ವಯಿಸುವ ನಿಯಮಗಳು ಇವುಗಳಿಗೂ ಅನ್ವಯಿಸುವುವು.

**42. ಆಸನ್ನಭೂತ :—**

ಧಾತುವು ಅಕರ್ಮಕವಾಗಿದ್ದಾಗ ಅದರ ಸಾಮಾನ್ಯ ಭೂತಕಾಲದ ರೂಪಕ್ಕೆ ಕರ್ತೃವಿನ ಪುರುಷ, ವಚನಗಳನ್ನನುಸರಿಸಿ **हूँ, हो, है, हैं**

ಎಂಬ ಸಹಾಯಕ ಕ್ರಿಯೆಗಳನ್ನು ಸೇರಿಸುವುದರಿಂದ ಆಸನ್ನಭೂತಕಾಲ ವಾಗುತ್ತದೆ.

ಉದಾ :—

ಪುಲ್ಲಿಂಗ :— मैं सोया हूँ, तुम सोये हो, वह सोया है, वे सोये हैं ।

ಸ್ತ್ರೀಲಿಂಗ— मैं सोयी हूँ, लड़कियाँ सोयी हैं ।

ಧಾತುವು ಸಕರ್ಮಕವಾಗಿದ್ದಾಗ (ಕರ್ತೃವಿಗೆ ने ಪ್ರತ್ಯಯವನ್ನು ಸೇರಿಸಿ) ಅದರ ಸಾಮಾನ್ಯ ಭೂತಕಾಲದ ರೂಪಕ್ಕೆ ಕರ್ಮದ ಲಿಂಗ, ವಚನಗಳನ್ನನುಸರಿಸಿ, है, हैं ಸಹಾಯಕ ಕ್ರಿಯೆಗಳನ್ನು ಸೇರಿಸಿದರೆ ಆಸನ್ನ ಭೂತಕಾಲವಾಗುತ್ತದೆ.

ಉದಾ :— मैंने घोड़ा देखा है, मैंने घोड़े देखे हैं, मैंने रोटी खायी है ।

43. ಪೂರ್ಣಭೂತ :—

ಧಾತುವು ಅಕರ್ಮಕವಾಗಿದ್ದಾಗ ಅದರ ಸಾಮಾನ್ಯ ಭೂತಕಾಲದ ರೂಪಕ್ಕೆ ಕರ್ತೃವಿನ ಲಿಂಗವಚನಗಳನ್ನನುಸರಿಸಿ ಭೂತಕಾಲಿಕ ಸಹಾಯಕ ಕ್ರಿಯೆಗಳಾದ था, थे, थी, थीं ಗಳನ್ನು ಸೇರಿಸಬೇಕು.

ಉದಾ :— मैं गया था, हम गये थे, सीता गयी थी, लड़कियाँ गयी थीं ।

ಧಾತುವು ಸಕರ್ಮಕವಾಗಿದ್ದರೆ ಕರ್ತೃವಿಗೆ ने ಸೇರಿಸಿ, ಕರ್ಮದ ಲಿಂಗ ವಚನಗಳನ್ನನುಸರಿಸಿ, ಸಾಮಾನ್ಯ ಭೂತಕಾಲದ ರೂಪಕ್ಕೆ था, थे, थी, थीं ಸೇರಿಸಬೇಕು.

ಉದಾ :— मैंने एक घोड़ा देखा था, मैंने कई घोड़े देखे थे, राम ने एक घोड़ी देखी थी ।

44. ಸಂದಿಗ್ಧಭೂತಕಾಲ :—

ಧಾತುವು ಅಕರ್ಮಕವಾಗಿದ್ದರೆ ಅದರ ಸಾಮಾನ್ಯ ಭೂತಕಾಲದ ರೂಪಕ್ಕೆ ಕರ್ತೃವಿನ ಪುರುಷ, ಲಿಂಗ, ವಚನಗಳಿಗನುಸಾರವಾಗಿ हूँगा,

**होगा, होंगे, होगे, होगी, होंगी** ಎಂಬ ಸಹಾಯಕ ಕ್ರಿಯೆಗಳನ್ನು ಸೇರಿಸಿದರೆ ಸಂದಿಗ್ಧ ಭೂತಕಾಲದ ರೂಪವಾಗುತ್ತದೆ.

ಉದಾ :—**मैं गया हूँगा, आप गये होंगे, तू गया होगा, मैं गयी हूँगी** ಇತ್ಯಾದಿ.

ಧಾತುವು ಸಕರ್ಮಕವಾಗಿದ್ದರೆ (ಕರ್ತೃವಿಗೆ **ने** ಸೇರಿಸಿ) ಅದರ ಸಾಮಾನ್ಯ ಭೂತಕಾಲದ ರೂಪಕ್ಕೆ ಕರ್ಮದ ಲಿಂಗವಚನಗಳನ್ನನುಸರಿಸಿ **होगा, होंगे, होगी, होंगी** ಎಂಬ ಸಹಾಯಕ ಕ್ರಿಯೆಗಳನ್ನು ಸೇರಿಸಿದರೆ ಸಂದಿಗ್ಧ ಭೂತಕಾಲರೂಪವಾಗುತ್ತದೆ.

ಉದಾ :—**मैंने घोड़ा देखा होगा, मैंने घोड़े देखे होंगे, मैंने घोड़ी देखी होगी, मैंने घोड़ियाँ देखी होंगी ।**

45. (ಅ) ಆಸನ್ನಭೂತಕಾಲ, ಪೂರ್ಣಭೂತಕಾಲ ಮತ್ತು ಸಂದಿಗ್ಧ ಭೂತಕಾಲದಲ್ಲಿ ಕರ್ಮಪದವು ಅಧ್ಯಾಹೃತವಾಗಿದ್ದರೆ ಅಥವಾ ಅದಕ್ಕೆ **को** ಎಂಬ ವಿಭಕ್ತಿ ಪ್ರತ್ಯಯವು ಸೇರಿದರೆ, ಸಕರ್ಮಕ ಕ್ರಿಯೆಯು ಕರ್ತೃ ಅಥವಾ ಕರ್ಮಪದದ ಲಿಂಗವಚನಗಳನ್ನು ಅನುಸರಿಸುವುದಿಲ್ಲ. ಆಗ ಅದು ಪ್ರಥಮ ಪುರುಷದ ಪುಲ್ಲಿಂಗ ಏಕವಚನದ ರೂಪವನ್ನು ತಾಳುತ್ತದೆ.

**उपन्यास** ಕಾದಂಬರಿ (ಕಟ್ಟುಕಥೆ)

**पता** ವಿಳಾಸ, ಪತ್ತೆ

**दान** ದಾನ, ಧರ್ಮ

**पायख़ाना (टट्टी)** ಬಹಿರ್ದೇಶ

**स्वदेशी** ಸ್ವದೇಶಿ

**फूल** ಹೂವು

**इस्तेमाल कर** ಉಪಯೋಗಿಸು

**नाटक** ನಾಟಕ

**सामान** ಸಾಮಾನು, ವಸ್ತುಗಳು

**मेहरबानी** ದಯೆ (ಸ್ತ್ರೀ)

**मदद** ಸಹಾಯ (ಸ್ತ್ರೀ)

**खुशबू** ಪರಿಮಳ, ಸುಗಂಧ (ಸ್ತ್ರೀ)

**बदबू** ನಾತ, ದುರ್ಗಂಧ (ಸ್ತ್ರೀ)

**विदेशी** ಪರದೇಶಿ

**पसंद कर** ಇಷ್ಟಪಡು (ಮೆಚ್ಚು)

**वत्ती** ಬತ್ತಿ, ದೀಪ (ಸ್ತ್ರೀ)

**आराम** ವಿಶ್ರಾಂತಿ, ಸುಖ

**कली** ಮೊಗ್ಗು, ಮುಗುಳು (ಸ್ತ್ರೀ)

**तकलीफ़, कष्ट** ತೊಂದರೆ (ಸ್ತ್ರೀ)

**जला** ದೀಪಹಚ್ಚು, ಉರಿಸು

| | |
|---|---|
| आज तुम्हारे पिता कहाँ गये हैं? | ಈ ದಿನ ನಿಮ್ಮ ತಂದೆಯವರು ಎಲ್ಲಿ ಹೋಗಿದ್ದಾರೆ. |
| वे कुछ सामान ख़रीदने वाज़ार गये हैं। | ಅವರು ಕೆಲವು ಸಾಮಾನುಗಳನ್ನು ಕೊಂಡುಕೊಳ್ಳಲು ಪೇಟೆಗೆ ಹೋಗಿದ್ದಾರೆ. |
| तुमने यह उपन्यास कभी पढ़ा है? | ನೀವು ಎಂದಾದರೂ ಈ ಕಾದಂಬರಿಯನ್ನು ಓದಿದ್ದೀರಾ? |
| हाँ, दो वर्ष पहले मैंने एक वार यह पुस्तक पढ़ी थी। | ಹೌದು, ಎರಡು ವರ್ಷಗಳ ಹಿಂದೆ ನಾನು ಒಂದಾವರ್ತಿ ಈ ಪುಸ್ತಕವನ್ನು ಓದಿದ್ದೆ. |
| कल जब मैं तुम्हारे घर तुमसे मिलने आया था, तब तुम कहाँ गये थे? | ನಿನ್ನೆ ನಿಮ್ಮ ಮನೆಗೆ ನಿಮ್ಮ ಭೇಟಿಗಾಗಿ ನಾನು ಬಂದಿದ್ದಾಗ ನೀವು ಎಲ್ಲಿ ಹೋಗಿದ್ದಿರಿ? |
| मैं वाहर नहीं गया था, उस समय मैं सो रहा था। | ನಾನು ಹೊರಗೆ ಹೋಗಿರಲಿಲ್ಲ, ಆ ಸಮಯದಲ್ಲಿ ನಾನು ಮಲಗಿದ್ದೆ. |
| जो आदमी कल अपके घर आया था उसका पता क्या है? | ನಿನ್ನೆ ತಮ್ಮ ಮನೆಗೆ ಬಂದಿದ್ದ ಮನುಷ್ಯನ ವಿಳಾಸವೇನು? |
| मैंने उस आदमी को पहले कभी. नहीं देखा था, इसलिए मैं उसका पता नहीं जानता। | ನಾನು ಆ ಮನುಷ್ಯನನ್ನು ಇದಕ್ಕೆ ಮೊದಲು ಎಂದೂ ನೋಡಿದ್ದಿಲ್ಲ, ಆದುದರಿಂದ ನನಗೆ ಅವನ ವಿಳಾಸವು ಗೊತ್ತಿಲ್ಲ. |
| मैं सोचती हूँ कि वे अपने साथ तुम्हारे लिए कुछ दवा लाये होंगे। | ಅವರು ತಮ್ಮ ಸಂಗಡ ನಿಮಗೋಸ್ಕರ ಸ್ವಲ್ಪ ಔಷಧಿ ತಂದಿರಬಹುದೆಂದು ನಾನು (ಸ್ತ್ರೀ) ಭಾವಿಸುತ್ತೇನೆ. |

| | |
|---|---|
| उन्होंने आपसे यह बात कही होगी, पर मुझसे किसीने नहीं कही। | ಅವರು ತಮ್ಮೊಡನೆ ಈ ಮಾತನ್ನು ಹೇಳಿರಬಹುದು, ಆದರೆ ನಮ್ಮೊಡನೆ ಯಾರೂ ಹೇಳಲಿಲ್ಲ. |
| रामचन्द्र ने यह नाटक देखा होगा, पर अब उसे याद नहीं। | ರಾಮಚಂದ್ರನು ಈ ನಾಟಕವನ್ನು ನೋಡಿರಬಹುದು, ಆದರೆ ಅವನಿಗೆ ಈಗ ನೆನಪಿಲ್ಲ. |
| आपकी मेहरबानी से मैंने वहाँ बहुत आराम पाया था। | ತಮ್ಮ ದಯೆಯಿಂದ ನನಗೆ ಅಲ್ಲಿ ಬಹಳ ಸುಖವು ದೊರೆತಿತ್ತು. |
| एण्डू कारनेगी ने लाखों रुपये दान में दिये थे। | ಆಂಡ್ರ್ಯೂ ಕಾರ್ನೆಗಿಯವರು ಲಕ್ಷಾಂತರ ರೂಪಾಯಿಗಳನ್ನು ದಾನ ಕೊಟ್ಟಿದ್ದರು. |
| मैंने उनकी मदद से ही यह काम किया है। | ನಾನು ಅವರ ಸಹಾಯದಿಂದಲೇ ಈ ಕೆಲಸವನ್ನು ಮಾಡಿದ್ದೇನೆ. |
| आप थोड़ी देर बैठिये, रामनाथ पायखाने गये हैं, जल्दी आएँगे। | ತಾವು ಸ್ವಲ್ಪ ಹೊತ್ತು ಕೂಡಿ, ರಾಮನಾಥರು ಬಹಿರ್ದೇಶಕ್ಕೆ ಹೋಗಿದ್ದಾರೆ, ಬೇಗನೆ ಬರುವರು. |
| इस फूल की खुशबू मैं बहुत पसन्द करता हूँ। | ಈ ಹೂವಿನ ಪರಿಮಳವನ್ನು ನಾನು ಬಹಳವಾಗಿ ಮೆಚ್ಚುತ್ತೇನೆ. |
| गुलाब का फूल सुन्दर भी है और खुशबूदार भी। | ಗುಲಾಬಿ ಹೂ ಸುಂದರವಾಗಿಯೂ ಮತ್ತು ಸುಗಂಧ ಉಳ್ಳದ್ದಾಗಿಯೂ ಇದೆ. |
| मुझे उसकी बात बहुत पसन्द आयी। | ನನಗೆ ಅವನ ಮಾತು ಬಹಳ ಒಪ್ಪಿಗೆ ಇದೆ. |
| इस घर में पायखाने की बदबू आती है, इसमें मत रहो। | ಈ ಮನೆಯಲ್ಲಿ ಬಹಿರ್ದೇಶದ ನಾತ ಬರುತ್ತದೆ, ಇದರೊಳಗೆ ವಾಸಿಸಬೇಡ. |
| यह बदबू कहाँ से आ रही है? | ಈ ನಾತವು ಎಲ್ಲಿಂದ ಬರುತ್ತಿದೆ? |

आप स्वदेशी चीज़ें इस्तेमाल करते हैं या विदेशी?

ನೀವು ಸ್ವದೇಶೀ ವಸ್ತುಗಳನ್ನು ಉಪಯೋಗಿಸುತ್ತೀರೋ ಅಥವಾ ಪರದೇಶೀ ವಸ್ತುಗಳನ್ನೋ?

मैं कुछ स्वदेशी और कुछ विदेशी चीज़ें इस्तेमाल करता हूँ।

ನಾನು ಕೆಲವು ಸ್ವದೇಶೀ, ಕೆಲವು ವಿದೇಶೀ ವಸ್ತುಗಳನ್ನು ಉಪಯೋಗಿಸುತ್ತೇನೆ.

किसने वत्ती जलायी?

ದೀಪವನ್ನು ಯಾರು ಹಚ್ಚಿದರು?

इस मकान में विजली की वत्तियाँ नहीं हैं।

ಈ ಮನೆಯಲ್ಲಿ ವಿದ್ಯುತ್ತಿನ ದೀಪವಿಲ್ಲ.

---

## ಪಾಠ 17

### ಭೂತಕಾಲ (ಮುಂದುವರಿದುದು)

46. ಹೇತುಹೇತುಮದ್ಭೂತ :—

(1) "ಅವನು ಬಂದಿದ್ದರೆ ನಾನು ಹೊರಡುತ್ತಿದ್ದೆನು." ಇಲ್ಲಿ ಮೊದಲನೆಯ ಭಾಗವು ಕಾರಣವಾಕ್ಯ, ಎರಡನೆಯ ಭಾಗವು ಕಾರ್ಯವಾಕ್ಯ. ಇಂತಹ ಕಾರಣ-ಕಾರ್ಯ ವಾಕ್ಯಗಳಲ್ಲಿರುವ ಧಾತುಗಳಿಗೆ ಪುಲ್ಲಿಂಗ ಏಕವಚನದಲ್ಲಿ **ता** ಎಂದೂ, ಬಹುವಚನದಲ್ಲಿ **ते** ಎಂದೂ, ಸ್ತ್ರೀಲಿಂಗ ಏಕವಚನದಲ್ಲಿ **ती** ಎಂದೂ, ಬಹುವಚನದಲ್ಲಿ **तीं** ಎಂದೂ ಪ್ರತ್ಯಯಗಳನ್ನು ಸೇರಿಸಿ, ಕಾರಣವಾಕ್ಯವನ್ನು **अगर** ಅಥವಾ **यदि** ಎಂಬ ಪದಗಳಿಂದ ಪ್ರಾರಂಭಿಸಿ, ಕಾರ್ಯವಾಕ್ಯವನ್ನು **तो** ಎಂಬುದರಿಂದ ಪ್ರಾರಂಭಿಸಿದರೆ ಹೇತುಹೇತುಮದ್ಭೂತಕಾಲವಾಗುವುದು.

ಉದಾ :—**अगर वह आता तो मैं निकलता।**

**अगर राम आता तो जानकी जाती।**

**अगर वे आते तो लड़कियाँ आतीं।** ಇತ್ಯಾದಿ.

(2) ಕಾರಣವಾಕ್ಯದ ಮೊದಲಿರುವ **अगर** ಶಬ್ದದ ಸಂಪೂರ್ಣಾರ್ಥಕ ವನ್ನು ಕಾರ್ಯವಾಕ್ಯದ ಮೊದಲಿನ **तो** ಎಂಬುದೇ ಸ್ಪಷ್ಟಪಡಿಸುವುದರಿಂದ ಕೆಲವುವೇಳೆ **अगर** ಪದವನ್ನು ಬಿಟ್ಟುಬಿಡುವುದುಂಟು. ಆದರೆ **तो** ವನ್ನು ಮಾತ್ರ ಬಿಡುವುದಿಲ್ಲ.

ಉದಾ :—**राम आता तो सीता जाती** ರಾಮನು ಬಂದಿದ್ದರೆ ಸೀತೆಯು ಹೋಗುತ್ತಿದ್ದಳು.

**तुम आते तो मैं भी तुम्हारे साथ चलता** ನೀವು ಬಂದಿದ್ದರೆ ನಾನೂ ನಿಮ್ಮ ಜತೆಗೆ ಹೊರಡುತ್ತಿದ್ದೆನು.

(3) ಹೇತುಹೇತುಮದ್ಭೂತ ರೂಪವೂ ಸಂಭಾವ್ಯ ರೂಪವಾಗಿರು ವುದು. ಆದರೆ ಅದರ ರೂಪವು ಭೂತಕಾಲದ ರೂಪಕ್ಕೆ ಹೋಲುವುದರಿಂದ ಅದನ್ನು ಭೂತಕಾಲದ ವರ್ಗಕ್ಕೆ ಸೇರಿಸಲಾಗಿದೆ. ಇದನ್ನು ಮುಂದಿನ ಪಾಠ ದಲ್ಲಿ ಹೇಳಿರುವ ಸಂಭಾವ್ಯ ಭವಿಷ್ಯದ್ರೂಪದೊಂದಿಗೂ ಓದಬಹುದು.

**47. ಅಪೂರ್ಣಭೂತ :—**

ಧಾತುವಿನ ಮೂಲರೂಪಕ್ಕೆ **ता** ಪ್ರತ್ಯಯವನ್ನು (**आ, ए, ई** ನಿಯ ಮವನ್ನು ಅನುಸರಿಸಿ) ಸೇರಿಸಿ, **हो** ಧಾತುವಿನ ಭೂತಕಾಲರೂಪಗಳಾದ **था, थे, थी, थीं** ಎಂಬ ಸಹಾಯಕ ಕ್ರಿಯೆಗಳನ್ನು ಸೇರಿಸಿದರೆ ಅಪೂರ್ಣ ಭೂತಕಾಲವಾಗುತ್ತದೆ. ಈ ಕಾಲದಲ್ಲಿ ಕರ್ತೃವಿಗೆ **ने** ಪ್ರತ್ಯಯವು ಬರುವು ದಿಲ್ಲ. ಕ್ರಿಯೆಯು ಕರ್ತೃವಿನ ಲಿಂಗವಚನಗಳನ್ನು ಅನುಸರಿಸುತ್ತದೆ.

ಉದಾ :—**मैं खाता था, हम खाते थे, सीता खाती थी, लड़कियाँ खाती थीं** ಇತ್ಯಾದಿ.

**48. ತಾತ್ಕಾಲಿಕ ವರ್ತಮಾನ ಮತ್ತು ಭೂತಕಾಲ.**

ಇವುಗಳು, ಕಾರ್ಯವು ಇನ್ನೂ ನಡೆಯುತ್ತಲೇ ಇದೆ ಎಂಬುದನ್ನು ಸೂಚಿಸುತ್ತದೆ. ಕ್ರಿಯೆಗಳಿಗೆ **आ, ए, ई** ನಿಯಮಕ್ಕೆ ಅನುಸಾರವಾಗಿ **रहा** ಸೇರಿಸುವುದರಿಂದ ಈ ಕಾಲಗಳು ಆಗುತ್ತವೆ.

ತಾತ್ಕಾಲಿಕ ವರ್ತಮಾನದ ರೂಪಗಳನ್ನು 5 ನೆಯ ಪಾಠದಲ್ಲಿ ಕೊಡಲಾಗಿದೆ. ತಾತ್ಕಾಲಿಕ ಭೂತಕಾಲದ ರೂಪಗಳನ್ನು ಕೆಳಗೆ ಕೊಡಲಾಗಿದೆ.

ಉದಾ :—**वह आ रहा था** ಅವನು ಬರುತ್ತಾ ಇದ್ದನು.
**सीता पढ़ रही थी** ಸೀತೆಯು ಓದುತ್ತಾ ಇದ್ದಳು.
**लड़के जा रहे थे** ಹುಡುಗರು ಹೋಗುತ್ತಾ ಇದ್ದರು.
**लड़कियाँ गा रही थीं** ಹುಡುಗಿಯರು ಹಾಡುತ್ತಾ ಇದ್ದರು.
**आप जा रही थीं** ತಾವು (ಸ್ತ್ರೀ) ಹೋಗುತ್ತಾ ಇದ್ದಿರಿ.
**वे आ रहे थे** ಅವರು ಬರುತ್ತಾ ಇದ್ದರು.

ಸೂಚನೆ :—ಹೇತುಹೇತುಮದ್ಭೂತ, ಅಪೂರ್ಣಭೂತ ಮತ್ತು ತಾತ್ಕಾಲಿಕ ಭೂತಕಾಲಗಳಲ್ಲಿ ಕರ್ತೃವಿನೊಡನೆ "ने" ಪ್ರತ್ಯಯವು ಬರುವುದಿಲ್ಲ.

**49. ಸಂದಿಗ್ಧವರ್ತಮಾನಕಾಲ.**

ಧಾತುವಿನ ಮೂಲರೂಪಕ್ಕೆ ಕರ್ತೃಪದವನ್ನನುಸರಿಸಿ **ता** ಅಥವಾ **ते** ಎಂಬುದನ್ನು ಸೇರಿಸಿ, ಆ ರೂಪಕ್ಕೆ ಕರ್ತೃಪದದ ಪುರುಷ, ಲಿಂಗ, ವಚನಗಳಿಗನುಸಾರವಾಗಿ **हूँगा, होंगे, होगा, होगे** ಎಂಬುದನ್ನು ಸೇರಿಸಿದರೆ ಸಂದಿಗ್ಧ ವರ್ತಮಾನಕಾಲದ ರೂಪಗಳಾಗುತ್ತವೆ.

ಸ್ತ್ರೀಲಿಂಗದಲ್ಲಿ **ता, ते** ಗೆ ಬದಲಾಗಿ **ती** ಯನ್ನೂ **हूँगा, होंगे, होगा, होगे** ಗಳಿಗೆ ಬದಲಾಗಿ **हूँगी, होंगी, होगी** ಯನ್ನು ಸೇರಿಸಬೇಕು.

ಉದಾ :—**मैं खाता हूँगा** ಅಥವಾ **मैं खाती हूँगी**
**आप खाते होंगे** ಅಥವಾ **आप खाती होंगी** ಇತ್ಯಾದಿ.

ಸೂಚನೆ :—**हूँगा, हूँगी** ಎಂಬುದನ್ನು **होऊँगा, होऊँगी** ಎಂದೂ ಬರೆಯುವ ವಾಡಿಕೆಯುಂಟು.

| | |
|---|---|
| **चावल** ಅಕ್ಕಿ | **आटा** ಹಿಟ್ಟು |
| **शराब** ಮದ್ಯ, ಶರಾಬು | **शक्कर** ಸಕ್ಕರೆ |
| **नक़द** ನಗದು, ರೊಕ್ಕ | **उधार** ಸಾಲ, ಕಡ |

साबुन ಸಾಬೂನು, ಸೋಪು
रिश्तेदार ಸಂಬಂಧಿಕ, ನೆಂಟ
चाचा ಚಿಕ್ಕಪ್ಪ
गेहूँ ಗೋಧಿ
सस्ता ಅಗ್ಗ
नया ಹೊಸ
कई ಅನೇಕ, ಹಲವು
ज़रूरी ಅವಶ್ಯಕ, ಮುಖ್ಯವಾದ
तैयार ಸಿದ್ಧ, ಸನ್ನದ್ಧ
बिकना ಮಾರಿಹೋಗುವುದು
फटा ಹರಿದ
बताना ಹೇಳಿ ತೋರಿಸುವುದು
पहचानना ಗುರುತು ಹಿಡಿಯುವುದು
बाल बनाना ಕ್ಷೌರಮಾಡುವುದು
हुकूमत करना ಆಳುವುದು

ज़ोर से ಬಲವಂತವಾಗಿ, ಜೋರಾಗಿ
शादी (स्त्री) विवाह ಮದುವೆ
मामा ಮಾವ [ಭಾಷಣೆ
बातचीत (स्त्री) ಮಾತುಕಥೆ, ಸಂ
महँगा ತುಟ್ಟಿ, ಪ್ರಿಯವಾದ
पुराना ಹಳೆಯ
हर ಪ್ರತಿಯೊಂದೂ
पहले ಮೊದಲು
सब कुछ ಎಲ್ಲಾ
बंद करना ಮುಚ್ಚುವುದು, ನಿಲ್ಲಿಸು
सड़ा ಕೊಳೆತ [ವುದು
छूना ಸ್ಪರ್ಶಿಸುವುದು, ಮುಟ್ಟುವುದು
बरसाना ಮಳೆಗೆರೆಯುವುದು
मना करना ತಡೆಯುವುದು, ನಿಷೇಧಿಸುವುದು

आप कल यहाँ आते तो मैं भी आपके साथ समुद्र चलता।
ತಾವು ನಿನ್ನೆ ಇಲ್ಲಿಗೆ ಬಂದಿದ್ದರೆ ನಾನು ಕೂಡಾ ನಿಮ್ಮೊಡನೆ ಸಮುದ್ರಕ್ಕೆ ಹೋಗುತ್ತಿದ್ದೆ.

तुम अपनी बात मुझे बताते तो अच्छा होता।
ನೀವು ನಿಮ್ಮ ಮಾತನ್ನು ನನಗೆ ಹೇಳಿದ್ದರೆ ಒಳ್ಳೇದಾಗುತ್ತಿತ್ತು.

जब तुम्हारे रिश्तेदार मेरे घर आये थे तब मैं आटा और शक्कर ख़रीदने बाज़ार जा रहा था।
ನಿಮ್ಮ ಸಂಬಂಧಿಕರು ನನ್ನ ಮನೆಗೆ ಬಂದಿದ್ದಾಗ ನಾನು ಹಿಟ್ಟು ಮತ್ತು ಸಕ್ಕರೆ ಕೊಂಡುಕೊಳ್ಳುವುದಕ್ಕೆಂದು ಪೇಟೆಗೆ ಹೋಗುತ್ತಾ ಇದ್ದೆ.

वे पहले इस साबुन का इस्तेमाल करते थे, पर आजकल नहीं करते।
ಅವರು ಮೊದಲು ಈ ಸಾಬೂನನ್ನು ಉಪಯೋಗಿಸುತ್ತಿದ್ದರು ಆದರೆ ಇತ್ತೀಚೆಗೆ ಉಪಯೋಗಿಸುವುದಿಲ್ಲ.

मेरे चाचा दो वर्ष तक उस पुराने मकान में रहते थे और उसके लिए वे पच्चीस रुपये किराया देते थे।

ನನ್ನ ಚಿಕ್ಕಪ್ಪನವರು ಎರಡು ವರ್ಷಗಳ ವರೆಗೆ ಆ ಹಳೆಯ ಕಟ್ಟಡದಲ್ಲಿ ವಾಸಿಸುತ್ತಿದ್ದರು ಮತ್ತು ಅದಕ್ಕೆ ಇಪ್ಪತ್ತೈದು ರೂಪಾಯಿ ಬಾಡಿಗೆ ಕೊಡುತ್ತಾ ಇದ್ದರು.

कल ख़ूब ज़ोर से पानी बरस रहा था, इसलिए मैं बाहर नहीं गया।

ನಿನ್ನೆ ಬಹಳ ಜೋರಾಗಿ ಮಳೆ ಹುಯ್ಯುತ್ತಿತ್ತು. ಆದುದರಿಂದ ನಾನು ಹೊರಗೆ ಹೋಗಲಿಲ್ಲ.

गोपाल की शादी की बातचीत हो रही है, लेकिन वह अभी शादी नहीं करना चाहता।

ಗೋಪಾಲನ ಮದುವೆಯ ಮಾತುಕಥೆಗಳು ನಡೆಯುತ್ತಾ ಇವೆ, ಆದರೆ ಅವನು ಈವಾಗಲೇ ಮದುವೆ ಮಾಡಿಕೊಳ್ಳಲು ಬಯಸುವುದಿಲ್ಲ.

उसके कपड़े फटे पुराने थे, इसलिए मैंने उसे नहीं पहचाना।

ಅವನ ಬಟ್ಟೆಗಳು ಹರಕು ಮತ್ತು ಹಳೆಯವಾಗಿದ್ದುವು, ಆದುದರಿಂದ ನಾನು ಅವನನ್ನು ಗುರ್ತಿಸಲಿಲ್ಲ.

वह कभी किसीसे कोई चीज़ उधार नहीं लेता।

ಅವನು ಯಾವಾಗಲೂ ಯಾರಿಂದಲೂ ಯಾವ ವಸ್ತುವನ್ನೂ ಸಾಲ ತೆಗೆದುಕೊಳ್ಳುವುದಿಲ್ಲ.

वह पहले बहुत शराब पीता था, लेकिन जब से मैंने उसे मना किया तब से वह शराब छूता भी नहीं।

ಅವನು ಮೊದಲು ಬಹಳವಾಗಿ ಸಾರಾಯಿ ಕುಡಿಯುತ್ತಾ ಇದ್ದನು, ಆದರೆ ನಾನು ಅದನ್ನು ನಿಷೇಧಿಸಿದಂದಿನಿಂದ ಅವನು ಸಾರಾಯಿಯನ್ನು ಮುಟ್ಟುವುದು ಕೂಡ ಇಲ್ಲ.

मुझे आज कई ज़रूरी काम थे, इसलिए बाल नहीं बनाये।

ನನಗೆ ಈ ದಿನ ಅನೇಕ ಆವಶ್ಯಕವಾದ ಕೆಲಸಗಳಿದ್ದುವು, ಆದುದರಿಂದ ಕ್ಷೌರ ಮಾಡಿಕೊಳ್ಳಲಿಲ್ಲ.

वह हर रोज़ हमारी दूकान से कुछ चीज़ें उधार लेता है।

ಅವನು ಪ್ರತಿದಿನವೂ ನಮ್ಮ ಅಂಗಡಿಯಿಂದ ಕೆಲವು ಸಾಮಾನುಗಳನ್ನು ಸಾಲ ತೆಗೆದುಕೊಳ್ಳುತ್ತಾನೆ.

| | |
|---|---|
| उसके मामा के पास नक़द रुपये बहुत हैं। | ಅವನ ಸೋದರ ಮಾವನ ಹತ್ತಿರ ನಗದು ಹಣ ಬಹಳ ಇದೆ. |
| यहाँ चावल बहुत सस्ता बिकता है, लेकिन गेहूँ बहुत महँगा है। | ಇಲ್ಲಿ ಅಕ್ಕಿ ಬಹಳ ಅಗ್ಗವಾಗಿದೆ, ಆದರೆ ಗೋಧಿಯು ಬಹಳ ತುಟ್ಟಿ. |
| वे लोग गाँवों और शहरों में शराब का पीना बंद करने की कोशिश कर रहे हैं। | ಅವರು ಹಳ್ಳಿ ಮತ್ತು ಪಟ್ಟಣಗಳಲ್ಲಿ ಮದ್ಯಪಾನವನ್ನು ನಿಲ್ಲಿಸುವುದಕ್ಕೆ ಯತ್ನಿಸುತ್ತಿದ್ದಾರೆ. |
| हम अपने देश के लिए सब कुछ करने को तैयार हैं। | ನಾವು ನಮ್ಮ ದೇಶಕ್ಕಾಗಿ ಎಲ್ಲವನ್ನೂ ಮಾಡುವುದಕ್ಕೆ ಸಿದ್ಧರಾಗಿದ್ದೇವೆ. |
| आप ज़ोर से हमारे ऊपर हुकूमत करना चाहते हैं। | ನೀವು ಬಲವಂತವಾಗಿ ನಮ್ಮನ್ನು ಆಳ ಬಯಸುತ್ತೀರಿ. |
| सिर्फ़ स्वदेशी चीज़ों का इस्तेमाल करना हमारे लिए बहुत ज़रूरी है। | ಕೇವಲ ಸ್ವದೇಶೀ ವಸ್ತುಗಳನ್ನೇ ಉಪಯೋಗಿಸುವುದು ನಮಗೆ ಬಹಳ ಅಗತ್ಯವಾಗಿದೆ. |
| जो लोग उसे पहचानते थे, वे जानते थे कि वह कितना बड़ा बेवकूफ़ था। | ಅವನು ಎಷ್ಟು ದೊಡ್ಡ ಮೂರ್ಖನಾಗಿದ್ದನೆಂಬುದನ್ನು ಅವನನ್ನು ಗುರುತಿಸುತ್ತಿದ್ದ ಜನರು ತಿಳಿದಿದ್ದರು. |
| जब मैं दफ़्तर से लौट रहा था, तब रास्ते में वे मिले। | ಕಚೇರಿಯಿಂದ ನಾನು ಹಿಂತಿರುಗಿ ಬರುತ್ತಾ ಇದ್ದಾಗ ಅವರು ದಾರಿಯಲ್ಲಿ ಸಿಕ್ಕಿದರು. |
| अगर मैं उनको पहचानता, तो ज़रूर उनसे बातचीत करता। | ನಾನು ಅವರನ್ನು ಗುರ್ತಿಸಿದ್ದ ಪಕ್ಷದಲ್ಲಿ ಅಗತ್ಯವಾಗಿ ಅವರೊಡನೆ ಸಂಭಾಷಿಸುತ್ತಿದ್ದೆ. |
| वे रामनाथजी के साथ बातचीत करते होंगे। | ಅವರು ರಾಮನಾಥರ ಸಂಗಡ ಮಾತನಾಡುತ್ತಿರಬಹುದು. |

| | |
|---|---|
| वह अब आता होगा। | ಅವನು ಈಗ ಬರುತ್ತಿರಬಹುದು. |
| आप रामनाथ को पहचानते होंगे। | ತಮಗೆ ರಾಮನಾಥನ ಪರಿಚಯವಿರಬಹುದು (ತಾವು ರಾಮನಾಥರನ್ನು ಅರಿತಿರಬಹುದು). |
| अब दो बज रहे होंगे। | ಈಗ ಎರಡು ಗಂಟೆ ಹೊಡೆಯುತ್ತಿರಬಹುದು. |

---

## ಪಾಠ 18
## ಸಂಭಾವ್ಯ ಭವಿಷ್ಯತ್ಕಾಲ

**50.** ಇದು ಭವಿಷ್ಯತ್ಕಾಲದ ಒಂದು ಭೇದ. ಭವಿಷ್ಯತ್ಕಾಲದಲ್ಲಿ ಕಾರ್ಯವಾಗುವ ಅಥವಾ ಮಾಡುವ ಕೇವಲ ಇಚ್ಛೆಯನ್ನು ತೋರಿಸುತ್ತದೆ. ಆ ಕೆಲಸವು ಆಗಬಹುದು ಅಥವಾ ಆಗದೇ ಇರಬಹುದು.

ಸಾಮಾನ್ಯ ಭವಿಷ್ಯತ್ಕಾಲರೂಪಗಳ ಕೊನೆಯ **गा, गे, गी, गीं** ಗಳನ್ನು ತೆಗೆದು ಹಾಕುವುದರಿಂದ ಸಂಭಾವ್ಯ ಭವಿಷ್ಯತ್ಕಾಲದ ರೂಪಗಳಾಗುತ್ತವೆ. ಇದರಲ್ಲಿ ಪುಂಲಿಂಗ ಸ್ತ್ರೀಲಿಂಗಗಳಲ್ಲಿ ರೂಪಗಳು ಒಂದೇ ಆಗಿರುತ್ತವೆ.

| | |
|---|---|
| ಉದಾ :—मैं खाऊँ | हम खाएँ |
| तू खाए | तुम खाओ, आप खाएँ |
| वह खाए | वे खाएँ |
| मैं लूँ | हम लें |
| तू ले | तुम लो, आप लें |
| वह ले | वे लें |

**51.** ಸಂಭಾವ್ಯ ಭವಿಷ್ಯದ್ರೂಪದ ಪ್ರಯೋಗಗಳು.

ಸಂಭಾವ್ಯ ಭವಿಷ್ಯದ್ರೂಪವು ಉದ್ದೇಶ, ಅಭಿಲಾಷೆ, ಆಜ್ಞೆ, ಅನುಮತಿ, ಷರತ್ತು, ಸಂದೇಹ ಮತ್ತು ಊಹೆ ಇವುಗಳನ್ನು ಸೂಚಿಸುತ್ತದೆ.

(1) ಉದ್ದೇಶ—ಇದರಲ್ಲಿ ನಿಮಿತ್ತವನ್ನು ಸೂಚಿಸುವ ವಾಕ್ಯವು **कि** ಅಥವಾ **जिससे** ಯಿಂದ ಪ್ರಾರಂಭವಾಗುತ್ತದೆ.

ಉದಾ:—**तुम उसको यहाँ बुलाओ जिससे वह मैसूर न जाए** ಅವನನ್ನು ಇಲ್ಲಿಗೆ ಕರೆ (ಯಾವುದರಿಂದ), ಅವನು ಮೈಸೂರಿಗೆ ಹೋಗದಿರಲಿ. (ಅವನು ಮೈಸೂರಿಗೆ ಹೋಗದಿರುವಂತೆ ಅವನನ್ನು ಇಲ್ಲಿಗೆ ಕರೆ.)

(2) ಅಭಿಲಾಷೆ ಮತ್ತು ಆಜ್ಞೆ ಅಥವಾ ಅನುಮತಿ—

**मैं जाऊँ** ನಾನು ಹೋಗಲೇ? (ಹೋಗಲು ಅಪ್ಪಣೆಯೆ?)

**मैं बोलूँ** ನಾನು ಮಾತಾಡಲೇ? (ಮಾತಾಡಲು ಅಪ್ಪಣೆಯೆ?)

**वह आज घर न जाए** ಅವನು ಇಂದು ಮನೆಗೆ ಹೋಗದಿರಲಿ.

**भारतवासियों के सब दुख दूर हों** ಭಾರತೀಯರ ದುಃಖಗಳೆಲ್ಲಾ ದೂರವಾಗಲಿ!

(3) ಷರತ್ತು—ಇದರಲ್ಲಿ ಕಾರ್ಯಕಾರಣ ಸಂಬಂಧವನ್ನು ತಿಳಿಸುವ ಎರಡು ವಾಕ್ಯಗಳು **तो** ಎಂಬ ಸಮುಚ್ಚಯದಿಂದ ಒಂದಾಗಿ ಸೇರಿಸಲ್ಪಟ್ಟಿರುತ್ತವೆ. ಮೊದಲನೇ ಕಾರಣವಾಕ್ಯವು **यदि** ಅಥವಾ **अगर** ಎಂಬ ಪದದಿಂದ ಪ್ರಾರಂಭವಾಗುವುದು. **अगर** ಅಥವಾ **यदि** ಯನ್ನು ಬಿಟ್ಟುಬಿಡುವುದೂ ಉಂಟು. ಕಾರ್ಯವಾಕ್ಯದ **तो** ಪದವು ಎಂದಿಗೂ ಲೋಪವಾಗುವುದಿಲ್ಲ. (ಹಿಂದಿನ ಪಾಠದಲ್ಲಿ ಹೇತುಹೇತುಮದ್ಭೂತ ರೂಪವನ್ನೂ ನೋಡಿರಿ).

ಉದಾ:—**अगर वह ऐसा कहे तो तुम यहीं रहो** ಅವನು ಹಾಗೆ ಹೇಳಿದರೆ ನೀವು ಇಲ್ಲಿಯೇ ಇರಿ.

**यदि तुम वहाँ जाओ तो उनसे ज़रूर मिलो** ನೀವು ಅಲ್ಲಿಗೆ ಹೋದರೆ ಅವರನ್ನು ಅಗತ್ಯವಾಗಿ ಭೇಟಿಯಾಗು.

ಸೂಚನೆ:—ಸಂಭಾವ್ಯ ಭವಿಷ್ಯತ್ಕಾಲದಲ್ಲಿ **तुम** ಕರ್ತೃವಾಗಿರುವಾಗ ಆ ಕಾಲದ ಕ್ರಿಯೆಯ ರೂಪವೂ ವಿಧ್ಯರ್ಥಕ ರೂಪವನ್ನು ಹೋಲುವುದು.

ಉದಾ :—तुम कहो तो मैं रहूँगा ನೀವು ಹೇಳಿದರೆ ನಾನು ಇರುವೆನು.

तुम नहीं समझो तो मैं क्या करूँ? ನೀವು ತಿಳಿದುಕೊಳ್ಳು ವುದಿಲ್ಲವಾದರೆ ನಾನೇನು ಮಾಡಲಿ?

(4) ಸಂದೇಹ ಮತ್ತು ಅನುಮಾನ—

कौन जाने? ಯಾರಿಗೆ ಗೊತ್ತು?

मैं क्या जानूँ? ನಾನೇನು ಬಲ್ಲೆ?

तुम सुनो या न सुनो मैं यह कहता हूँ ನೀವು ಕೇಳಿ ಅಥವಾ ಕೇಳದಿರಿ, ನಾನು ಇದನ್ನು ಹೇಳುತ್ತೇನೆ.

जब तक वह न आए तब तक मैं नहीं निकलूँगा ಅವನು ಬರುವವರೆಗೂ ನಾನು ಹೊರಡುವುದಿಲ್ಲ.

ऐसा हो तो ಹಾಗಾದರೆ.

वे वहाँ हों तो ಅವರು ಅಲ್ಲಿರುವುದಾದರೆ.

मेरे पास पाँच रुपये हों तो ನನ್ನ ಹತ್ತಿರ ಐದು ರೂಪಾಯಿ ಗಳಿದ್ದರೆ.

ಸೂಚನೆ :—साईस से कहो कि वह मेरा घोड़ा लाये ಕುದುರೆಯಾಳಿಗೆ ನನ್ನ ಕುದುರೆಯನ್ನು ತರಬೇಕೆಂದು ಹೇಳು.

उससे कहो कि वह बाज़ार जाये ಅವನು ಪೇಟೆಗೆ ಹೋಗ ಬೇಕೆಂದು ಹೇಳು.

नौकर को आज्ञा दो कि वह मिठाई लाये ಮಿಠಾಯಿ ತರ ಬೇಕೆಂದು ಸೇವಕನಿಗೆ ಆಜ್ಞೆಮಾಡು.

धोबी ಅಗಸ

क़सूर ತಪ್ಪು, ಅಪರಾಧ

फ़ायदा ಲಾಭ, ಪ್ರಯೋಜನ

कसरत (ಸ್ತ್ರೀ) ವ್ಯಾಯಾಮ

दया (ಸ್ತ್ರೀ) ಕರುಣೆ, ದಯೆ

चेहरा ಮೋರೆ, ಮುಖ

दवा (ಸ್ತ್ರೀ) ಔಷಧಿ

नुक़सान ನಷ್ಟ

हवा (ಸ್ತ್ರೀ) ಗಾಳಿ

सेब ಸೇಬು

खुदा, भगवान् ದೇವರು

मेहनत ಪರಿಶ್ರಮ, ಕೆಲಸ

सर्दी (ಸ್ತ್ರೀ), जुकाम (ಪು.) ಶೀತ, [ನೆಗಡಿ

कमज़ोर ನಿಶ್ಶಕ್ತ

साफ़ ಸ್ವಚ್ಛ, ಶುದ್ಧ

माफ़ करना ಕ್ಷಮಿಸುವುದು

मालूम होना ಗೊತ್ತಾಗುವುದು

मानना ಒಪ್ಪುವುದು

बनना ಆಗುವುದು

इच्छा (ಸ್ತ್ರೀ) ಇಚ್ಛೆ, ಅಪೇಕ್ಷೆ

बुखार ಜ್ವರ

जो ಯಾವ, ಯಾವುದಾದರೂ

दूसरा ಬೇರೆ

अंगूर ದ್ರಾಕ್ಷಿ

मज़बूत ಬಲವುಳ್ಳ, ಗಟ್ಟಿಮುಟ್ಟಾದ

गंदा ಕೊಳೆ, ಹೊಲಸು

मदद करना ಸಹಾಯಮಾಡುವುದು

वापस आना ಹಿಂತಿರುಗಿ ಬರುವುದು

मेहनत करना ಪರಿಶ್ರಮ ಪಡುವುದು (ಕಷ್ಟಪಡುವುದು)

टहलना ಓಡಾಡುವುದು

| | |
|---|---|
| अगर धोबी मेरे कपड़े लाये, तो मैं आज ज़रूर रवाना होऊँगा । | ಅಗಸನು ನನ್ನ ಬಟ್ಟೆಗಳನ್ನು ತಂದರೆ ನಾನು ಈ ದಿನ ಅವಶ್ಯಕವಾಗಿ ಹೊರಡುವೆನು. |
| उसकी तकलीफ़ देखो, तो उसपर दया आएगी । | ಅವನ ಕಷ್ಟವನ್ನು ನೋಡಿದರೆ ಅವನ ಮೇಲೆ ಕನಿಕರವುಂಟಾಗುವುದು. |
| तुम अपना क़सूर मानो, तो मैं तुमको माफ़ करूँगा । | ನೀವು ನಿಮ್ಮ ಅಪರಾಧವನ್ನು ಒಪ್ಪಿಕೊಳ್ಳುವುದಾದರೆ ನಾನು ನಿಮ್ಮನ್ನು ಕ್ಷಮಿಸುವೆನು. |
| आप उनके साथ न जायें, तो भी कोई नुक़सान नहीं है । | ತಾವು ಅವರ ಸಂಗಡ ಹೋಗದಿದ್ದರೂ ಏನೂ ನಷ್ಟವಿಲ್ಲ. |
| इस काम में कोई फ़ायदा न हो, तो भी वह इसे ज़रूर करेगा । | ಈ ಕಾರ್ಯದಲ್ಲಿ ಯಾವ ಪ್ರಯೋಜನವಿಲ್ಲದಿದ್ದರೂ ಅವನು ಇದನ್ನು ಅವಶ್ಯವಾಗಿ ಮಾಡುವನು. |

| | |
|---|---|
| क्या आपकी यह इच्छा है कि मैं मदद करूँ? | ನಾನು ಸಹಾಯಮಾಡಬೇಕೆಂದು ನೀವು ಅಪೇಕ್ಷಿಸುತ್ತೀರಾ? |
| मैं जाऊँ और आपके लिए कुछ सेब और अंगूर लाऊँ? | ನಾನು ಹೋಗಿ ತಮಗೋಸ್ಕರ ಸ್ವಲ್ಪ ಸೇಬು ಮತ್ತು ದ್ರಾಕ್ಷಿ ತರಲೋ? |
| जब तक मैं वापस न आऊँ तब तक आप यहीं ठहरें। | ನಾನು ಹಿಂತಿರುಗಿ ಬರುವವರೆಗೂ ತಾವು ಇಲ್ಲಿಯೇ ಇರಿ. |
| आप कल आएँ और इस काम को ख़तम करने में मेरी मदद करें। | ತಾವು ನಾಳೆ ಬಂದು ಈ ಕೆಲಸವನ್ನು ಪೂರೈಸುವುದರಲ್ಲಿ ನನಗೆ ಸಹಾಯ ಮಾಡಿರಿ. |
| ख़ूब कसरत करो जिससे मज़बूत बनो। | ಬಲಶಾಲಿಯಾಗುವಂತೆ ಚೆನ್ನಾಗಿ ವ್ಯಾಯಾಮ ಮಾಡಿ. |
| आप उस लड़के को कुछ इनाम दीजिये, जिससे वह ख़ूब मेहनत करे। | ಅವನು ಚೆನ್ನಾಗಿ ಪರಿಶ್ರಮ ಮಾಡಲೆಂದು ತಾವು ಆ ಹುಡುಗನಿಗೆ ಸ್ವಲ್ಪ ಬಹುಮಾನ ಕೊಡಿರಿ. |
| उनको बुख़ार आए, तो उन्हें मेरी दवा खाने को कहिये। | ಅವರಿಗೆ ಜ್ವರ ಬಂದರೆ ನನ್ನ ಔಷಧಿಯನ್ನು ಸೇವಿಸಲಿಕ್ಕೆ ಹೇಳಿರಿ. |
| रोज़ सुबह साफ़ हवा में टहलो, तो तुम्हारी तबीयत अच्छी रहेगी। | ಪ್ರತಿದಿನವೂ ಪ್ರಾತಃಕಾಲ ಸ್ವಚ್ಛವಾದ ಗಾಳಿಯಲ್ಲಿ ತಿರುಗಾಡಿದರೆ ನಿಮ್ಮ ಆರೋಗ್ಯವು ಒಳ್ಳೆದಾಗಿರುವುದು. |
| उसका चेहरा देखो, तो वह कमज़ोर मालूम होगा। | ಅವನ ಮುಖವನ್ನು ನೋಡಿದರೆ ಅವನು ಬಲಹೀನನೆಂದು ಗೊತ್ತಾಗುವುದು. |
| ख़ुदा जाने, वे क्या करना चाहते हैं! | ಅವರು ಏನು ಮಾಡಲಿಚ್ಛಿಸುತ್ತಾರೊ, ದೇವರೇ ಬಲ್ಲ! |
| तुम यह काम करना पसन्द नहीं करते, तो मैं तुमको दूसरा काम देता। | ನೀವು ಈ ಕೆಲಸವನ್ನು ಮಾಡಲು ಇಷ್ಟಪಡುತ್ತಿದ್ದಿಲ್ಲವಾದರೆ ನಾನು ನಿಮಗೆ ಬೇರೆ ಕೆಲಸವನ್ನು ಕೊಡುತ್ತಿದ್ದೆ. |

| | |
|---|---|
| गंदा पानी पीने से जुकाम होता है। | ಅಶುದ್ಧವಾದ ನೀರು ಕುಡಿಯುವುದರಿಂದ ನೆಗಡಿಯಾಗುತ್ತದೆ. |
| मुझे उसका नाम मालूम था, लेकिन अभी याद नहीं। | ನನಗೆ ಅವನ ಹೆಸರು ಗೊತ್ತಿತ್ತು, ಆದರೆ ಈಗ ನೆನಪಿಲ್ಲ. |
| अगर वहाँ उमदा और मीठे आम मिलें, तो मेरे लिए ज़रूर ख़रीदो। | ಅಲ್ಲಿ ಸೊಗಸಾದ ಮತ್ತು ಸಿಹಿಯಾದ ಮಾವಿನ ಹಣ್ಣು ಸಿಕ್ಕಿದರೆ ನನಗಾಗಿ ಕೆಲವನ್ನು ಅಗತ್ಯವಾಗಿ ಕೊಂಡುಕೊಳ್ಳಿರಿ. |
| मैंने सुना है कि कल पंडितजी का व्याख्यान है; अगर ऐसा हो तो हम वहाँ ज़रूर चलेंगे। | ನಾಳೆ ಪಂಡಿತಜೀಯವರ ಭಾಷಣವಿದೆಯೆಂದು ನಾನು ಕೇಳಿದ್ದೇನೆ, ಹಾಗಿದ್ದರೆ ನಾವು ಅಲ್ಲಿಗೆ ಅವಶ್ಯವಾಗಿ ಹೋಗೋಣ. |
| अगर वे वहाँ न हों, तो तुम वापस चले आना। | ಅವರು ಅಲ್ಲಿಲ್ಲದೆ ಹೋದರೆ ನೀವು ಹಿಂತಿರುಗಿ ಬಂದುಬಿಡಿರಿ. |
| कहूँ तो क्या कहूँ? | ಹೇಳುವುದಾದರೆ ಏನು ಹೇಳಲಿ? |
| जाऊँ तो कहाँ जाऊँ? | ಹೋಗುವುದಾದರೆ ಎಲ್ಲಿ ಹೋಗಲಿ? |
| करूँ तो क्या करूँ? | ಮಾಡುವುದಾದರೆ ಏನು ಮಾಡಲಿ? |
| हो न हो। | ಇರಲಿ-ಇಲ್ಲದಿರಲಿ. |
| पण्डित हो या मूर्ख। | ವಿದ್ವಾಂಸನಾಗಿರಲಿ-ಮೂರ್ಖನಾಗಿರಲಿ. |
| दोस्त हो या दुश्मन। | ಮಿತ್ರನಾಗಿರಲಿ-ಶತ್ರುವಾಗಿರಲಿ. |
| जो करो। | ನೀನು ಮಾಡಿದಂತೆ. |
| जो कहो। | ನೀನು ಹೇಳಿದಂತೆ. |
| जो चाहो। | ನೀನು ಇಚ್ಛಿಸಿದಂತೆ. |

## ಪಾಠ 19

### ಕೃದಂತ

52. ಧಾತುವಿಗೆ '**ता**' ಅಥವಾ '**ता हुआ**' ಎಂಬುದನ್ನು ಸೇರಿಸಿದರೆ ವರ್ತಮಾನಕಾಲಿಕ ಕೃದಂತ (Present participle) ವಾಗುವುದು.

(ಅ) ಇದು ಸಾಮಾನ್ಯವಾಗಿ ವಿಶೇಷಣದಂತೆ ಉಪಯೋಗಿಸಲ್ಪಡುವುದು ಮತ್ತು ಆಗ ಇದು ಆಕಾರಾಂತ ವಿಶೇಷಣದಂತೆ ರೂಪಾಂತರವನ್ನು ಹೊಂದುವುದು. (आ, ए, ई ನಿಯಮ)

ಉದಾ:—**चलती (हुई) गाड़ी** ಚಲಿಸುತ್ತಿರುವ ಗಾಡಿ.
**सोता (हुआ) लड़का** ನಿದ್ರಿಸುತ್ತಿರುವ ಹುಡುಗ.

(ಆ) ಇದು ಆಗಾಗ್ಗೆ ನಾಮಪದದಂತೆ ಉಪಯೋಗಿಸಲ್ಪಡುವುದುಂಟು. ಮತ್ತು ಆಗ ಇದು ಆಕಾರಾಂತ ಪುಂಲಿಂಗ ನಾಮಪದದಂತೆ ರೂಪಾಂತರ ಹೊಂದುತ್ತದೆ.

ಉದಾ:—**डूबते को तिनके का सहारा काफी है** ಮುಳುಗುತ್ತಿರುವವನಿಗೆ ಹುಲ್ಲುಕಡ್ಡಿಯ ಆಧಾರವೇ ಸಾಕು.
**गिरे हुओं का उद्धार करना चाहिए** ಪತಿತರಾದವರನ್ನು ಉದ್ಧರಿಸಬೇಕು.

(ಇ) ಇದು ವಿಧೇಯಾರ್ಥದಲ್ಲಿ ಬಂದು ಕರ್ತೃ ಅಥವಾ ಕರ್ಮದ ವಿಶೇಷತೆಯನ್ನು ಸೂಚಿಸುತ್ತದೆ.

ಉದಾ:—**वह गाता (हुआ) आता है** ಅವನು ಹಾಡುತ್ತಾ ಬರುತ್ತಾನೆ.
**स्त्रियाँ गीत गाती हुई गयीं** ಹೆಂಗಸರು ಹಾಡನ್ನು ಹಾಡುತ್ತಾ ಹೋದರು.
**सिपाही ने कई चोरों को भागते हुए देखा** ಸಿಪಾಯಿಯು ಅನೇಕ ಕಳ್ಳರು ಓಡುತ್ತಿರುವುದನ್ನು ನೋಡಿದನು.

ಕರ್ತೃ ಮತ್ತು ಕರ್ಮ ಇವೆರಡೂ ವಿಭಕ್ತಿ ಪ್ರತ್ಯಯಗಳನ್ನು ಹೊಂದಿರುವಾಗ ಇದು ವಿಕೃತ ಕ್ರಿಯಾರೂಪದಲ್ಲಿರುವುದು.

ಉದಾ :—मैंने जानकी को आते हुए देखा ನಾನು ಜಾನಕಿಯು ಬರುತ್ತಿದ್ದುದನ್ನು ನೋಡಿದೆನು.

तुमने हम लोगों को कभी गाते हुए सुना है? ನಾವು ಹಾಡುವುದನ್ನು ನೀವು ಎಂದಾದರೂ ಕೇಳಿರುವಿರಾ?

ಸೂಚನೆ :—ಕೃದಂತಕ್ಕೆ समय, वक़्त ಎಂಬುವು ಪರವಾದರೆ ता ಎಂಬುದು ते ಆಗುತ್ತದೆ ಮತ್ತು ಕರ್ತೃವು ಷಷ್ಠೀವಿಭಕ್ತಿಯಲ್ಲಿರುತ್ತದೆ.

ಉದಾ :—मेरे जाते समय ನಾನು ಹೋಗುವಾಗ.

उसके पढ़ते समय ಅವಳು ಓದುವಾಗ.

तोते के बोलते समय ಗಿಳಿಯು ಮಾತಾಡುವಾಗ.

हमारे काम करते समय ನಾವು ಕೆಲಸಮಾಡುವಾಗ.

(ಈ) ವರ್ತಮಾನಕಾಲಿಕ ಕೃದಂತದ ಅಂತ್ಯದ 'ता' ಅಥವಾ 'ता हुआ' ಎಂಬುದನ್ನು 'ते' ಅಥವಾ 'ते हुए' ಎಂದು ಮಾಡಿ ಅದನ್ನು ಕ್ರಿಯಾವಿಶೇಷಣವಾಗಿ ಉಪಯೋಗಿಸುವರು.

ಉದಾ :—यह कहते हुए मुझे बड़ी खुशी होती है ಇದನ್ನು ಹೇಳಲು ನನಗೆ ಬಹಳ ಸಂತೋಷವಾಗುತ್ತದೆ.

वहाँ से लौटते-लौटते रात हो जाएगी ಅಲ್ಲಿಂದ ಹಿಂದಿರುಗುವುದರಲ್ಲಿ ರಾತ್ರಿಯಾಗುತ್ತದೆ.

काम करते-करते वह बहुत थक गया है ಕೆಲಸ ಮಾಡುತ್ತ ಮಾಡುತ್ತ ಅವನು ಬಹಳ ಬಳಲಿದ್ದಾನೆ.

53. "ಕೃದಂತ ಭೂತಕಾಲ" ದಲ್ಲಿ आ, ए, ई ನಿಯಮವನ್ನನುಸರಿಸಿ 'हुआ' ಎಂಬುದನ್ನು ಧಾತುವಿನ ಸಾಮಾನ್ಯ ಭೂತಕಾಲದ ರೂಪಕ್ಕೆ

ಸೇರಿಸತಕ್ಕದ್ದು. ಆದರೆ ಅನೇಕವೇಳೆ ಸಾಮಾನ್ಯ ಭೂತಕಾಲದ ರೂಪವನ್ನೇ ಕೃದಂತ ಭೂತಕಾಲವಾಗಿ ಪ್ರಯೋಗಿಸುವುದುಂಟು. ಇದನ್ನು ಹೆಚ್ಚಾಗಿ ವಿಶೇಷಣವಾಗಿ ಉಪಯೋಗಿಸುತ್ತಾರೆ.

ಉದಾ:—**खिला** (ಅಥವಾ **खिला हुआ**) **फूल** ಅರಳಿದ ಪುಷ್ಪ.
**सोयी** (ಅಥವಾ **सोयी हुई**) **औरत** ನಿದ್ರಿಸಿದ ಹೆಂಗಸು.
**पढ़ा-लिखा आदमी** ಓದುಬರಹ ಬಲ್ಲ ಮನುಷ್ಯ.
**वह सोया** (**हुआ**) **है** ಅವನು ನಿದ್ರಿಸುತ್ತಾನೆ.

54. ಪೂರ್ವಕಾಲಿಕ ಕೃದಂತದಲ್ಲಿ **कर** ಎಂಬುದನ್ನು ಧಾತುವಿಗೆ ಸೇರಿಸಬೇಕು.

ಉದಾ:—**खाकर** ತಿಂದು **सुनकर** ಕೇಳಿ
**देखकर** ನೋಡಿ **सोकर** ಮಲಗಿ

ಸೂಚನೆ:—ಸಕರ್ಮಕ ಕ್ರಿಯೆಯ ಪೂರ್ವಕಾಲಿಕ ಕೃದಂತಕ್ಕೆ **आना** ಮತ್ತು **जाना** ಎಂಬ ಕ್ರಿಯಾರೂಪಗಳು ಪರವಾದರೆ **कर** ಎಂಬುದು ಲೋಪವಾಗುವುದು.

ಉದಾ:—**सुन जाओ** ಕೇಳಿ ಹೋಗು.
**देख आता है** ನೋಡಿ ಬರುತ್ತಾನೆ.
**कर गया** ಮಾಡಿಹೋದ.

ಸೂಚನೆ:—'**कर**' ಎಂಬುದರ ಪೂರ್ವಕಾಲಿಕ ಕೃದಂತವು **करकर** ಎಂಬುವುದರಬದಲು '**करके**' ಎಂದಾಗುತ್ತದೆ.

55. (ಅ) ಸಾಮಾನ್ಯ ಭೂತಕಾಲದ ಕ್ರಿಯೆಗೆ **कर** ಎಂಬುದನ್ನು ಸೇರಿಸಿದರೆ ಕೃದಂತರೂಢ್ಯಾತ್ಮಕ ರೂಪವಾಗುವುದು.

ಉದಾ:—**आया कर** ಬರುತ್ತಾ ಇರು.
**पढ़ा कर** ಓದುತ್ತಾ ಇರು.

वह रोज़ आया करता है ಅವನು ನಿತ್ಯವೂ ಇಲ್ಲಿಗೆ ಬರುತ್ತಿರುತ್ತಾನೆ.

ಸೂಚನೆ:—(1) जा ಎಂಬುದರ ರೂಪವು गया कर ಎಂದಾಗಿದೆ जाया कर (ಹೋಗುತ್ತಾ ಇರು) ಎಂದಾಗುತ್ತದೆ.

(2) ಕೃದಂತ ರೂಢ್ಯಾತ್ಮಕದ ಭೂತಕಾಲದಲ್ಲಿ 'ने' ಯ ಪ್ರಯೋಗವಿಲ್ಲ. वह बहुत दिनों तक पढ़ा किया ಅವನು ಅನೇಕ ದಿನಗಳವರೆಗೆ ಓದುತ್ತಾ ಇದ್ದನು. सीता बहुत दिनों तक पढ़ा की ಸೀತೆಯು ಬಹಳ ದಿನಗಳವರೆಗೆ ಓದುತ್ತಿದ್ದಳು.

(ಅ) ಹೇತುಹೇತುಮದ್ಭೂತ ರೂಪವನ್ನೂ ಅಪೂರ್ಣಭೂತ ರೂಪವನ್ನೂ ಕೆಲವುವೇಳೆ ರೂಢ್ಯಾತ್ಮಕ ಅರ್ಥದಲ್ಲಿ ಉಪಯೋಗಿಸುವುದುಂಟು.

ಉದಾ:—वह मेरे यहाँ आता और घंटों बैठता ಅವನು ನಮ್ಮ ಮನೆಗೆ ಬಂದು ಅನೇಕ ಘಂಟೆಗಳವರೆಗೆ ಕುಳಿತುಕೊಳ್ಳುತ್ತಿದ್ದನು.

वह रोज़ मेरे खाने के लिए कुछ फल भेजता ಪ್ರತಿನಿತ್ಯವೂ ಅವನು ನನಗೆ ತಿನ್ನುವುದಕ್ಕೆ ಕೆಲವು ಹಣ್ಣುಗಳನ್ನು ಕಳುಹಿಸುತ್ತಿದ್ದನು.

दयानंदजी संस्कृत में ही बोलते थे ದಯಾನಂದರು ಸಂಸ್ಕೃತದಲ್ಲಿಯೇ ಮಾತನಾಡುತ್ತಿದ್ದರು.

| | |
|---|---|
| **परवाह** (ಸ್ತ್ರೀ) ಗಣನೆ, ಪರವಾ | **खड़ा** ನಿಂತ |
| **परवाह करना** ಲಕ್ಷಿಸುವುದು | **खड़ा होना** ನಿಂತುಕೊಳ್ಳುವುದು |
| **बीतना** ಕಳೆದು ಹೋಗುವುದು (ಕಾಲ) | **खोना** ಕಳಕೊಳ್ಳುವುದು, ಕಳೆದು ಹೋಗುವುದು |
| **चबाना** ಅಗಿಯುವುದು | **पचना** ಜೀರ್ಣವಾಗುವುದು |
| **इज़्ज़त** (ಸ್ತ್ರೀ) ಗೌರವ, ಮರ್ಯಾದೆ | **इज़्ज़त करना** ಗೌರವಿಸುವುದು |

**दुनिया** (ಸ್ತ್ರೀ) ಪ್ರಪಂಚ
**सवेरे** ಬೆಳಗ್ಗೆ
**अमीर** ಶ್ರೀಮಂತ
**ईमानदार** ವಿಶ್ವಾಸಪಾತ್ರ
**तन्दुरुस्ती** ಆರೋಗ್ಯ
**अन्न** ಅನ್ನ, ಆಹಾರ
**वूढ़ा** ಮುದುಕ, ಮುದಿ
**ग़रीब** ಬಡವ
**वेईमान** ಅವಿಶ್ವಾಸೀ
**समुद्र का किनारा** ಸಮುದ್ರತೀರ
**किनारा** ದಡ, ದಂಡೆ, ತೀರ

| | |
|---|---|
| मैंने कल आपको रामनाथ के साथ वातचीत करते देखा। | ನಾನು ನಿನ್ನೆ ನೀವು ರಾಮನಾಥನೊಡನೆ ಸಂಭಾಷಿಸುತ್ತಿರುವುದನ್ನು ನೋಡಿದೆ. |
| वे हँसते हुए कुछ कह रहे थे। | ಅವರು ನಗುತ್ತಾ ಏನೋ ಹೇಳುತ್ತಿದ್ದರು. |
| आपकी छोटी वहन भी आपकी बातें सुनती (हुई) वहाँ खड़ी थी। | ನಿಮ್ಮ ತಂಗಿಯೂ ಕೂಡಾ ಅವರ ಮಾತುಗಳನ್ನು ಕೇಳುತ್ತಾ ಅಲ್ಲಿ ನಿಂತಿದ್ದಳು. |
| आज मैं उनके घर जाकर उनसे मिला। | ಈ ದಿನ ನಾನು ಅವರ ಮನೆಗೆ ಹೋಗಿ ಅವರನ್ನು ಭೇಟಿ ಮಾಡಿದೆನು. |
| वे मुझे देखकर वहुत खुश हुए। | ಅವರು ನನ್ನನ್ನು ನೋಡಿ ಬಹಳ ಸಂತೋಷಗೊಂಡರು. |
| वह वूढ़ा आदमी अभी अपना काम करके वाहर गया है। | ಆ ಮುದುಕನು ಈಗತಾನೆ ತನ್ನ ಕೆಲಸವನ್ನು ಮಾಡಿ ಹೊರಗೆ ಹೋಗಿದ್ದಾನೆ. |
| जाओ, उसे एक वार देख आओ। | ಹೋಗು, ಅವನನ್ನು ಒಂದಾವರ್ತಿ ನೋಡಿ ಬಾ. |
| यह काम कर जाओ। | ಈ ಕೆಲಸವನ್ನು ಮಾಡಿ ಹೋಗು. |
| वीते हुए दिन कभी वापस नहीं आते। | ಕಳೆದು ಹೋದ ದಿನಗಳು ಎಂದಿಗೂ ಪುನಃ ಬರುವುದಿಲ್ಲ. |
| खूव चवाकर खाया हुआ अन्न जल्दी पचता है। | ಚೆನ್ನಾಗಿ ಮೆದ್ದು ತಿಂದ ಅನ್ನ ಬೇಗನೆ ಜೀರ್ಣವಾಗುತ್ತದೆ. |

| | |
|---|---|
| कही हुई बात को फिर कहना ठीक नहीं है। | ಹೇಳಿದ ಮಾತನ್ನು ಇನ್ನೊಮ್ಮೆ ಹೇಳುವುದು ಸರಿಯಲ್ಲ. |
| उनकी दी हुई पुस्तक कहाँ है? | ಅವರು ಕೊಟ್ಟ ಪುಸ್ತಕವೆಲ್ಲಿದೆ? |
| दुनिया में जितनी चीज़ें हैं सब ईश्वर की दी हुई हैं। | ಪ್ರಪಂಚದಲ್ಲಿರುವ ವಸ್ತುಗಳೆಲ್ಲಾ ದೇವರು ಕೊಟ್ಟಿದ್ದಾಗಿವೆ. |
| तुम रोज़ सबेरे पाँच बजे उठा करो, तो तुम्हारी तबीयत ठीक रहेगी। | ನೀವು ನಿತ್ಯವೂ ಬೆಳಿಗ್ಗೆ ಐದು ಘಂಟೆಗೆ ಏಳುತ್ತಿರುವುದಾದರೆ ನಿಮ್ಮ ಆರೋಗ್ಯವು ಚೆನ್ನಾಗಿರುವುದು. |
| आपके दोस्त कभी-कभी यहाँ आया करते हैं। | ತಮ್ಮ ಮಿತ್ರರು ಆಗಾಗ ಇಲ್ಲಿಗೆ ಬರುತ್ತಿರುತ್ತಾರೆ. |
| अमीर आदमी की सब लोग इज़्ज़त करते हैं, पर ग़रीब को कोई नहीं पूछता। | ಶ್ರೀಮಂತನನ್ನು ಎಲ್ಲರೂ ಗೌರವಿಸುತ್ತಾರೆ, ಆದರೆ ಬಡವನನ್ನು ಯಾರೂ ಕೇಳುವುದಿಲ್ಲ. |
| इस शहर में ईमानदार आदमी बहुत ज़्यादा और बेईमान बहुत कम मालूम होते हैं। | ಈ ಪಟ್ಟಣದಲ್ಲಿ ವಿಶ್ವಾಸಪಾತ್ರರು ಬಹಳ ಹೆಚ್ಚಾಗಿಯೂ ವಿಶ್ವಾಸಘಾತಕರು ಬಹಳ ಕಡಿಮೆಯಾಗಿಯೂ ಕಂಡುಬರುತ್ತಾರೆ. |
| वे कभी किसी बात की परवाह नहीं करते। | ಅವರು ಎಂದಿಗೂ ಯಾವ ವಿಷಯವನ್ನೂ ಗಣಿಸು (ಲಕ್ಷಿಸು) ವುದಿಲ್ಲ. |
| सोये हुए सिंह को जगाना ठीक नहीं। | ನಿದ್ರಿಸುವ ಸಿಂಹವನ್ನು ಎಚ್ಚರಿಸುವುದು ಒಳ್ಳೆಯದಲ್ಲ. |
| वे रोज़ बड़े सबेरे उठकर समुद्र पर टहलने जाते थे। | ನಿತ್ಯವೂ ಅವರು ಬೆಳಿಗ್ಗೆ ಮುಂಚಿತವಾಗಿ ಎದ್ದು ಸಮುದ್ರತೀರಕ್ಕೆ ತಿರುಗಾಡಲು ಹೋಗುತ್ತಿದ್ದರು. |

---

## ಪಾಠ 20

### ಸಹಾಯಕ ಕ್ರಿಯೆಗಳು

56. ಪ್ರಧಾನ ಕ್ರಿಯಾಪದಕ್ಕೆ **सक, चुक, लग, दे, पा** ಮತ್ತು **चाह** ಎಂಬ ಸಹಾಯಕ (ಸಹಾಯಾರ್ಥ) ಕ್ರಿಯೆಗಳು ಸೇರುತ್ತವೆ. ಹೀಗೆ ಸೇರಿದಾಗ ಕಾಲ, ಪುರುಷ, ಲಿಂಗ ವಚನಗಳಿಂದ ಆಗುವ ಪ್ರತ್ಯಯಾಂತ ಭೇದಗಳು ಇವುಗಳಿಗೆ ಮಾತ್ರ ಅನ್ವಯಿಸುತ್ತವೆ. ಪ್ರಧಾನ ಕ್ರಿಯೆಯಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ.

(1) **सक** ಎಂಬುದು 'ಶಕ್ಯತೆ' ಯನ್ನು ತೋರ್ಪಡಿಸುವುದಕ್ಕಾಗಿ ಧಾತುವಿಗೆ ಸೇರಿಸಲ್ಪಡುತ್ತದೆ.

ಉದಾ:—**मैं खा सकता हूँ** ನಾನು ತಿನ್ನಲು ಶಕ್ಯನು (ನಾನು ತಿನ್ನಬಲ್ಲೆನು).

**वे हिन्दी पढ़ सकते हैं** ಅವರು ಹಿಂದಿಯನ್ನು ಓದಬಲ್ಲರು.

**आप जा सकेंगे** ತಾವು ಹೋಗಬಲ್ಲಿರಿ.

**तुम बोल सकते थे** ನೀವು ಮಾತಾಡ ಬಲ್ಲವರಾಗಿದ್ದಿರಿ.

**कमला वहाँ नहीं जा सकी** ಕಮಲೆಯು ಅಲ್ಲಿ ಹೋಗಲಾಗಲಿಲ್ಲ.

(2) **चुक** ಎಂಬುದನ್ನು ಧಾತುವಿಗೆ ಸೇರಿಸಿದರೆ ಕ್ರಿಯೆಯ 'ಮುಕ್ತಾಯವು' ಗೊತ್ತಾಗುವುದು.

ಉದಾ:—**वह पढ़ चुका** ಅವನು ಓದಿ ಮುಗಿಸಿದನು.

**मैं सो चुकी** ನಾನು ನಿದ್ದೆಮಾಡಿ ಮುಗಿಸಿದೆ.

**मैं कह चुका हूँ** ನಾನು ಹೇಳಿ ಬಿಟ್ಟದ್ದೇನೆ.

**वे बोल चुके थे** ಅವರು ಮಾತಾಡಿ ಮುಗಿಸಿದ್ದರು.

**वे कह चुके थे** ಅವರು ಹೇಳಿ ಬಿಟ್ಟಿದ್ದರು.

**वे कर चुके होंगे** ಅವರು ಮಾಡಿ ಮುಗಿಸಿರಬಹುದು.

(3) **दे** ಯನ್ನು ಅನುಮತ್ಯರ್ಥಕವಾಗಿ ಪ್ರಯೋಗಿಸುವರು.

ಮೊದಲು ಕ್ರಿಯಾರ್ಥಕ ಸಂಜ್ಞೆಯ (ಭಾವನಾಮ) ಅಂತ್ಯಾಕ್ಷರ **ना** ವನ್ನು **ने** ಯಾಗಿ ಮಾರ್ಪಡಿಸಿ **दे** ಸಹಾಯಕ ಕ್ರಿಯೆಯನ್ನು ಸೇರಿಸಬೇಕು. **दे** ಯು ಕರ್ತೃವಿನ ಪುರುಷ, ಲಿಂಗ, ವಚನಗಳನ್ನು ಅನುಸರಿಸುತ್ತದೆ.

ಉದಾ :—**तुम मुझे जाने दो** ನೀವು ನನ್ನನ್ನು ಹೋಗಗೊಡಿರಿ.

**उसको बोलने दीजिये** ಅವನನ್ನು ಮಾತಾಡಗೊಡಿರಿ.

**मैंने उसको जाने दिया** ನಾನು ಅವನನ್ನು ಹೋಗಗೊಟ್ಟೆನು.

(4) **लग** ಎಂಬುದು '**दे**' ಯಂತೆ ರೂಪಾಂತರ ಹೊಂದಿದ ಭಾವನಾಮದೊಡನೆ ಸೇರಿಸಿ ಉಪಯೋಗಿಸಲ್ಪಡುವುದು. ಇದರಿಂದ ಕಾರ್ಯದ ಪ್ರಾರಂಭವು ತಿಳಿಯುವುದು.

ಉದಾ :—**मैं बोलने लगा** ನಾನು ಮಾತನಾಡ ತೊಡಗಿದೆ.

**प्रमीला सोने लगी** ಪ್ರಮೀಳೆ ನಿದ್ರಿಸತೊಡಗಿದಳು.

**हम देखने लगे** ನಾವು ನೋಡ ತೊಡಗಿದೆವು.

(5) **पा** ಎಂಬುದನ್ನು ಶಕ್ಯತಾ ಬೋಧಕವಾಗಿ ಪ್ರಯೋಗಿಸುವರು. '**पा**' ಎಂಬುದು ಧಾತುವಿಗೆ ಅಥವಾ ರೂಪಾಂತರ ಹೊಂದಿದ ಭಾವನಾಮಕ್ಕೆ ಸೇರುತ್ತದೆ.

ಉದಾ :—**कर पाना** ಅಥವಾ **करने पाना** ಮಾಡಲಾಗುವುದು.

**मैं वहाँ नहीं जा पाया** ಅಥವಾ **जाने पाया** ನಾನು ಅಲ್ಲಿಗೆ ಹೋಗಲಾರದಾದೆ.

**तुम नहीं सुन पाओगे** ಅಥವಾ **सुनने पाओगे** ನೀನು ಕೇಳಲಾರೆ.

(6) **चाह** ಎಂಬುದನ್ನು 'ಅಪೇಕ್ಷೆ' ಯನ್ನು ಸೂಚಿಸುವುದಕ್ಕೋಸ್ಕರ ಭಾವನಾಮದ ಸಂಗಡ ಪ್ರಯೋಗಿಸುವರು.

ಉದಾ:—**मैं जाना चाहता हूँ** ನಾನು ಹೋಗಲು ಅಪೇಕ್ಷಿಸುತ್ತೇನೆ.

**तुम क्या करना चाहते हो?** ನೀವು ಏನು ಮಾಡಲು ಅಪೇಕ್ಷಿಸುತ್ತೀರಿ?

**मैंने सीखना चाहा** ನಾನು ಕಲಿಯಲಿಚ್ಛಿಸಿದೆ.

57. **चाह** ಮತ್ತು **दे** ಇವುಗಳು ಭೂತಕಾಲದಲ್ಲಿದ್ದಾಗ **ने** ಪ್ರತ್ಯಯವನ್ನು ಕರ್ತೃವಿಗೆ, ಪ್ರಧಾನ ಕ್ರಿಯೆಯು ಸಕರ್ಮಕವಾಗಿದ್ದರೂ ಅಕರ್ಮಕವಾಗಿದ್ದರೂ ಸೇರಿಸಬೇಕು.

ಉದಾ:—**मैंने उसे जाने दिया** ನಾನು ಅವನನ್ನು ಹೋಗಗೊಟ್ಟೆ.

**उसने सोना चाहा** ಅವನು ನಿದ್ರಿಸಲಪೇಕ್ಷಿಸಿದನು.

**लड़ाई** ಯುದ್ಧ
**गाड़ी** ಗಾಡಿ
**ख़्याल** ವಿಚಾರ, ಭಾವನೆ
**रिश्तेदार** ಸಂಬಂಧಿಕ
**माता, माँ** ತಾಯಿ
**दूकान** (ಸ್ತ್ರೀ) ಅಂಗಡಿ
**हफ़्ता** ವಾರ, ಸಪ್ತಾಹ
**वार** ಸರ್ತಿ, ಬಾರಿ
**जीतना** ಜಯಿಸುವುದು
**भागना** ಓಡುವುದು
**पिछला** ಹಿಂದಿನ
**झगड़ा** ಜಗಳ
**सवारी** ವಾಹನ
**ज़ायदाद** (ಸ್ತ್ರೀ) ಆಸ್ತಿ, ಸಂಪತ್ತು
**चोर** ಕಳ್ಳ
**पिता, बाप** ತಂದೆ
**दूकानदार** ಅಂಗಡಿಕಾರ, ಅಂಗಡಿಯವನು
**ग़ौर** ಲಕ್ಷ್ಯ, ಧ್ಯಾನ
**दर्शन** ದರ್ಶನ, ಭೇಟಿ
**ज़ब्त होना** ಜಪ್ತಿಯಾಗುವುದು (ಮುಟ್ಟುಕೋಲು ಹಾಕುವುದು)
**वसूल करना** ವಸೂಲಿಮಾಡುವುದು
**सारा** ಸಮಸ್ತ, ಯಾವತ್ತು

| | |
|---|---|
| क्या अब आप हिन्दी समझ सकते हैं? | ಈಗ ತಾವು ಹಿಂದೀ ಭಾಷೆಯನ್ನು ತಿಳಿದುಕೊಳ್ಳಬಲ್ಲಿರಾ? |
| हाँ, अब मैं थोड़ी-थोड़ी हिन्दी समझ सकता हूँ। | ಹೌದು, ಈಗ ನಾನು ಸ್ವಲ್ಪ ಸ್ವಲ್ಪ ಹಿಂದಿಯನ್ನು ಅರ್ಥ ಮಾಡಿಕೊಳ್ಳಬಲ್ಲೆ. |
| जो काम दस आदमी मिलकर नहीं कर सकते, उसे वह अकेले कर सकता है। | ಹತ್ತು ಜನರು ಒಟ್ಟು ಸೇರಿ ಮಾಡಲಾರದ ಕೆಲಸವನ್ನು ಅವನು ಒಬ್ಬನೇ ಮಾಡಬಲ್ಲನು. |
| पिछली लड़ाई में जर्मनी नहीं जीत सका। | ಹಿಂದಿನ ಯುದ್ಧದಲ್ಲಿ ಜರ್ಮನಿಯು ಜಯಿಸಲಾರದೆ ಹೋಯಿತು. |
| वे आपना काम कर चुके। | ಅವರು ತಮ್ಮ ಕೆಲಸವನ್ನು ಮಾಡಿ ಮುಗಿಸಿದರು. |
| जब हम गाड़ी में बैठे चुके तब 'फक-फक' करती हुई गाड़ी रवाना हुई। | ನಾವು ಗಾಡಿಯಲ್ಲಿ ಕುಳಿತಮೇಲೆ ಗಾಡಿಯು 'ಫಫ್, ಫಫ್' ಎಂದು (ಶಬ್ದ) ಮಾಡುತ್ತಾ ಹೊರಟಿತು. |
| मेरा ख्याल है कि अब तक आपके रिश्तेदार कलकत्ते पहुँच चुके होंगे। | ಇಷ್ಟರೊಳಗೆ ನಿಮ್ಮ ಸಂಬಂಧಿಕರು ಕಲ್ಕತ್ತೆಗೆ ತಲಪಿರಬಹುದೆಂದು ನಾನು ಭಾವಿಸುತ್ತೇನೆ. |
| वहाँ पहुँचने पर मैंने सुना कि उनकी सारी जायदाद ज़ब्त हो चुकी है। | ನಾನು ಅಲ್ಲಿ ತಲಪಿದ ಮೇಲೆ ಅವರ ಆಸ್ತಿಯೆಲ್ಲಾ ಜಪ್ತಿಯಾಗಿ ಹೋಯಿತೆಂದು ಕೇಳಿದೆನು. |
| विद्यार्थी ने मास्टर से कहा, "मुझे दो हफ़्ते के लिए घर जाने दीजिये।" | ವಿದ್ಯಾರ್ಥಿಯು ಉಪಾಧ್ಯಾಯರೊಡನೆ—"ನನ್ನನ್ನು ಎರಡು ವಾರಗಳ ಮಟ್ಟಿಗೆ ಮನೆಗೆ ಹೋಗಗೊಡಿರಿ" ಎಂದು ಹೇಳಿದನು. |
| बहुत कोशिश करनें पर भी पुलिस ने चोरों को भागने नहीं दिया। | ಬಹಳ ಪ್ರಯತ್ನಮಾಡಿದರೂ ಪೋಲೀಸರು ಕಳ್ಳರನ್ನು ಓಡಿ ಹೋಗಲು ಬಿಡಲಿಲ್ಲ. |

| | |
|---|---|
| छोटे बच्चे जब बोलने लगते हैं तब उनके माता-पिता उन्हें देखकर बहुत ख़ुश होते हैं। | ಚಿಕ್ಕ ಮಕ್ಕಳು ಮಾತನಾಡಲು ಪ್ರಾರಂಭಿಸಿದಾಗ ಅವರ ತಾಯಿತಂದೆಗಳು ಅವರನ್ನು ನೋಡಿ ಬಹಳ ಸಂತೋಷ ಪಡುತ್ತಾರೆ. |
| जब वह मेरी ओर ग़ौर से देखने लगा तब मैंने उससे पूछा—"तुम क्या कहना चाहते हो?" | ಅವನು ನನ್ನ ಕಡೆಗೆ ಲಕ್ಷ್ಯವಿಟ್ಟು ನೋಡತೊಡಗಿದಾಗ, "ನೀನು ಏನು ಹೇಳಲಪೇಕ್ಷಿಸುತ್ತೀ?" ಎಂದು ನಾನು ಅವನನ್ನು ಕೇಳಿದೆನು. |
| उसने जबाब दिया—"मैं कुछ नहीं चाहता।" | "ನಾನೇನೂ ಅಪೇಕ್ಷಿಸುವುದಿಲ್ಲ" ಎಂದು ಅವನು ಉತ್ತರಕೊಟ್ಟನು. |
| मैंने एक बार वहाँ जाकर उनके दर्शन करना चाहा, पर समय नहीं पा सका। | ನಾನು ಒಂದು ಬಾರಿ ಅಲ್ಲಿ ಹೋಗಿ ಅವರನ್ನು ಭೇಟಿ ಮಾಡಬೇಕೆಂದು ಅಪೇಕ್ಷಿಸಿದೆ, ಆದರೆ ಸಮಯ ಸಿಕ್ಕಲಿಲ್ಲ. |
| अगर पानी बरसने लगेगा, तो मैं वहाँ नहीं जा पाऊँगा। | ಮಳೆ ಬರುವುದಕ್ಕೆ ಪ್ರಾರಂಭವಾದರೆ ನಾನು ಅಲ್ಲಿಗೆ ಹೋಗಲಾರೆ. |
| यदि मैं उसे देख पाता, तो अपने सारे रुपये उससे वसूल करता। | ನಾನು ಅವನನ್ನು ನೋಡಲಾಗುತ್ತಿದ್ದರೆ ನನ್ನ ಎಲ್ಲಾ ರೂಪಾಯಿಗಳನ್ನು ಅವನಿಂದ ವಸೂಲಿಮಾಡುತ್ತಿದ್ದೆ. |
| स्टेशन जाने के लिए कोई सवारी नहीं मिली, इसलिए मैं गाड़ी पकड़ न सका। | ಸ್ಟೇಶನಿಗೆ ಹೋಗಲು ವಾಹನವು ಸಿಕ್ಕದೆ ಹೋದುದರಿಂದ ನಾನು ಗಾಡಿ ಹಿಡಿಯಲಾರದಾದೆ (ನನಗೆ ರೈಲು ಸಿಗಲಿಲ್ಲ). |
| आज तुम वहाँ किसी तरह न जाने पाओगे। | ಯಾವ ರೀತಿಯಲ್ಲಿಯೂ ನೀನು ಈ ಹೊತ್ತು ಅಲ್ಲಿಗೆ ಹೋಗಲಾರೆ. |
| इस बाज़ार में सब दूकानदार सिर्फ़ स्वदेशी कपड़े बेचते हैं। | ಈ ಪೇಟೆಯಲ್ಲಿ ಎಲ್ಲ ಅಂಗಡಿಯವರೂ ಸ್ವದೇಶಿ ಬಟ್ಟೆಯನ್ನು ಮಾತ್ರ ಮಾರುತ್ತಾರೆ. |

## ಪಾಠ 21

### ಸಂಯುಕ್ತ ಕ್ರಿಯೆಗಳು

58. ಹೇಳತಕ್ಕ ಅಭಿಪ್ರಾಯದ ಅರ್ಥವನ್ನು ಒತ್ತಿ ಹೇಳುವುದಕ್ಕಾಗಿ ಬರುವ (ಎರಡು) ಕ್ರಿಯಾಪದಗಳ ಜೋಡಣೆಯೇ ಸಂಯುಕ್ತ ಕ್ರಿಯೆಯು. ಇಂತಹ ಜೋಡಣೆಯು ಹಿಂದಿಯಲ್ಲಿ ಸರ್ವಸಾಧಾರಣವಾಗಿ ಉಪಯೋಗಿಸಲ್ಪಡುತ್ತದೆ. ಈ ಜೋಡಣೆಯಲ್ಲಿ ಮೊದಲನೆಯ ಧಾತುವು ಮೂಲರೂಪದಲ್ಲೇ ಇರುತ್ತದೆ. ಎರಡನೆಯ ಧಾತುವು ಕರ್ತೃವಿನ ಲಿಂಗ, ವಚನ, ಪುರುಷಗಳನ್ನು ಅನುಸರಿಸಿ ರೂಪಾಂತರ ಹೊಂದುತ್ತದೆ.

ಅನೇಕ ಸಂದರ್ಭಗಳಲ್ಲಿ ಈ ಜೋಡಣೆಯ ಎರಡನೆಯ ಧಾತುವಿನ ನಿಜವಾದ ಅರ್ಥವು ಲುಪ್ತವಾಗಿ ಅದಕ್ಕೆ ಬೇರೆ ಅರ್ಥ ಬರುತ್ತದೆ. ಅಥವಾ ಹಿಂದಿನ ಅರ್ಥದ ಸ್ವಲ್ಪ ಅಂಶ ಮಾತ್ರ ಭಾಸವಾಗುತ್ತದೆ. ಕನ್ನಡಲ್ಲಿಯೂ ಇಂತಹ ಪ್ರಯೋಗವಿದೆ. ಉದಾ :—ಬಂದುಬಿಡು, ಬಿದ್ದುಹೋಗು, ತಿಂದುಹಾಕು, ಕೂತುಕೊಳ್ಳು ಇತ್ಯಾದಿ.

59. **जाना, देना, लेना, डालना, पड़ना, उठना, बैठना, छोड़ना, रखना** ಮುಂತಾದ ಕ್ರಿಯೆಗಳನ್ನು ಎರಡನೆಯ ಧಾತುವಾಗಿ ಪ್ರಯೋಗಿಸುವರು.

(1) (ಅ) **जाना** ಇದು ಎರಡನೆಯ ಧಾತುವಾಗಿ ಬಂದಾಗ ಕಾರ್ಯದ ಪೂರ್ಣತ್ವವು ಗೊತ್ತಾಗುತ್ತದೆ.

ಉದಾ :—

**आ जाना** ಬಂದು ಬಿಡುವುದು — **सो जाना** ನಿದ್ರಿಸಿಬಿಡುವುದು
**हो जाना** ಆಗಿಹೋಗುವುದು — **मर जाना** ಸತ್ತುಹೋಗುವುದು
**खा जाना** ತಿಂದು ಹಾಕುವುದು — **घबड़ा जाना** ಗಾಬರಿಪಡುವುದು
**भूल जाना** ಮರೆತುಹೋಗುವುದು — **ले जाना** ತೆಕ್ಕೊಂಡು ಹೋಗುವುದು
**जान जाना** ತಿಳಕೊಂಡುಬಿಡುವುದು — **मिल जाना** ಸೇರುವುದು, ಭೇಟಿಯಾಗುವುದು

(ಅ) चला जाना (ಹೊರಟುಹೋಗುವುದು) चला आना (ಬಂದು ಬಿಡುವುದು) ಎಂಬವು ಅಪವಾದವಾಗಿರುವುವು. ಈ ಜೋಡಣೆಗಳಲ್ಲಿ ಎರಡು ಧಾತುಗಳೂ ಕರ್ತೃವಿನ ಲಿಂಗವಚನಗಳನ್ನನುಸರಿಸುತ್ತವೆ.

ಉದಾ :—चला गया (ಪು) चला आया (ಪು) चले गये
चली गयी (ಸ್ತ್ರೀ) चली आयी (ಸ್ತ್ರೀ) चली आयीं

(2) देना ಮತ್ತು लेना ಎಂಬವುಗಳು ಪ್ರಯೋಗಿಸಲ್ಪಟ್ಟಾಗ ಅವುಗಳ ನಿಜವಾದ ಅರ್ಥವು ಜೋಡಣೆಯಲ್ಲಿ ಬಹುಮಟ್ಟಿಗೆ ಗೋಚರವಾಗುತ್ತದೆ.*

ಉದಾ :—

| | |
|---|---|
| दे देना ಕೊಟ್ಟುಬಿಡುವುದು | खा लेना ತಿಂದುಬಿಡುವುದು |
| खोल देना ತೆರೆದುಬಿಡುವುದು | सुन लेना ಕೇಳಿಬಿಡುವುದು |
| कह देना ಹೇಳಿಬಿಡುವುದು | छीन लेना ಎಳಕೊಂಡುಬಿಡುವುದು |
| डाल देना ಹಾಕಿ ಬಿಡುವುದು | पहचान लेना ಕಂಡು ಹಿಡಿಯುವುದು |
| छोड़ देना ಬಿಟ್ಟುಬಿಡುವುದು | लूट लेना ಸುಲಿಗೆಮಾಡಿಬಿಡುವುದು |
| खो देना ಕಳೆದುಕೊಳ್ಳುವುದು | बना लेना ಸರಿಪಡಿಸಿಕೊಳ್ಳುವುದು |
| चल देना ಹೊರಟುಬಿಡುವುದು | ले लेना ತೆಕ್ಕೊಂಡುಬಿಡುವುದು |
| गिरा देना ಬೀಳಿಸಿಬಿಡುವುದು | मान लेना ಒಪ್ಪಿಕೊಳ್ಳುವುದು |
| भेज देना ಕಳುಹಿಸಿಬಿಡುವುದು | पकड़ लेना ಹಿಡಕೊಂಡುಬಿಡುವುದು |
| खिला देना ತಿನ್ನಿಸಿಬಿಡುವುದು | समझ लेना ತಿಳಿದುಕೊಂಡುಬಿಡುವುದು |
| हटा देना ತೊಲಗಿಸಿಬಿಡುವುದು | लौटा लेना ವಾಪಸು ತೆಕ್ಕೊಂಡು ಬಿಡುವುದು |

* देना ಎಂಬುದು ಇನ್ನೊಂದು ಕ್ರಿಯಾಧಾತುವಿನೊಡನೆ ಸೇರಿದಾಗ ಆಕಾರವು ತನ್ನ ಕರ್ತೃವಿನಿಂದ ಕರ್ಮದ ಅಧೀನಕ್ಕೆ ಹೋದಂತೆಯೂ, लेना ಎಂಬುದು ಇನ್ನೊಂದು ಕ್ರಿಯಾಧಾತುವಿನೊಡನೆ ಸೇರಿದಾಗ ಅದು ತನ್ನ ಕರ್ತನೆಡೆಗೆ ಹಿಂತಿರುಗಿದಂತೆಯೂ ಅರ್ಥವಾಗುತ್ತದೆ.

**मिटा देना** ಅಳಿಸಿಬಿಡುವುದು **लौटा देना** ವಾಪಸು ಕೊಟ್ಟುಬಿಡುವುದು
**जला देना** ಸುಟ್ಟುಬಿಡುವುದು

(3) **डालना** ಎಂಬುದು 'ಹಾಕುವುದು' 'ಬಿಡುವುದು' ಎಂಬ ಅರ್ಥವನ್ನು ಕೊಡುತ್ತದೆ.

ಉದಾ:—**मार डालना** ಕೊಂದು ಹಾಕುವುದು
**उखाड़ डालना** ಕಿತ್ತು ಹಾಕುವುದು
**तोड़ डालना** ಮುರಿದು ಹಾಕುವುದು
**काट डालना** ಕತ್ತರಿಸಿ ಹಾಕುವುದು
**दे डालना** ಕೊಟ್ಟು ಬಿಡುವುದು
**खा डालना** ತಿಂದು ಬಿಡುವುದು, ತಿಂದು ಹಾಕುವುದು.

(4) (ಅ) **पड़ना** 'ಬೀಳುವುದು' ಎಂಬುದರಿಂದ ಕಾರ್ಯದ ಆಕಸ್ಮಿಕ ಘಟನೆಯು ಗೊತ್ತಾಗುತ್ತದೆ.

ಉದಾ:—**गिर पड़ना** ಬಿದ್ದುಬಿಡುವುದು
**चौंक पड़ना** ಬೆಚ್ಚಿ (ಅಳುಕಿ) ಬೀಳುವುದು.
**निकल पड़ना** ಹೊರಟು ಬಿಡುವುದು

(ಆ) ಜ್ಞಾನೇಂದ್ರಿಯಗಳ ಕ್ರಿಯೆಯನ್ನು ಸೂಚಿಸುವ ಧಾತುಗಳಿಗೆ **पड़ना** ಎಂಬುದನ್ನು ಸೇರಿಸಿದರೆ ಆಗ ಅದು ಕರ್ಮಪದದ ಮೇಲೆ ತನ್ನ ಒತ್ತಾಯವನ್ನು ಸೂಚಿಸುತ್ತದೆ.

ಉದಾ:—**देख पड़ना** ಕಣ್ಣಿಗೆ ಬೀಳುವುದು
**जान पड़ना** ಗೊತ್ತಾಗುವುದು
**समझ पड़ना** ತಿಳಿದು ಬರುವುದು
**सुन पड़ना** ಕೇಳಿ ಬರುವುದು

(5) **तडना** ಇದು ಕಾರ್ಯದ ಆಕಸ್ಮಿಕ ಅಥವಾ ಅನಿರೀಕ್ಷಿತ ಸ್ಥಿತಿಯನ್ನು ಸೂಚಿಸುತ್ತದೆ.

ಉದಾ :—**बोल तडना** ಮಾತಾಡಿ ಬಿಡುವುದು (ಹಠಾತ್ತಾಗಿ)
**कह तडना** ಕೂಗಿ ಹೇಳುವುದು (ಗಟ್ಟಿಯಾಗಿ)
**जाग तडना** ಎಚ್ಚರವಾಗುವುದು
**चिल्ला तडना** ಕಿರಚಾಡುವುದು
**काँप तडना** ಥರಥರನೆ ನಡುಗುವುದು

(6) **बैठना** ಇದರಿಂದ ಕಾರ್ಯದ ಶೀಘ್ರತೆಯು (ಅವಸರವು) ವ್ಯಕ್ತವಾಗುತ್ತದೆ.

ಉದಾ :—**मार बैठना** ಹೊಡದೇ ಬಿಡುವುದು (ಹಿಂದುಮುಂದೆ ಯೋಚಿಸದೆ)
**कर बैठना** ಮಾಡಿಯೇ ಬಿಡುವುದು (ವಿಚಾರಮಾಡದೆ ಮತ್ತು ಬಹಳ ಅವಸರವಾಗಿ)
**बिगड़ बैठना** ಕೋಪಿಸಿಕೊಳ್ಳುವುದು
**पूछ बैठना** ಪ್ರಶ್ನಿಸಿಬಿಡುವುದು

(7) **छोड़ना** ಮತ್ತು **रखना** ಇವುಗಳು "ಬಿಡುವಿಕೆ" ಮತ್ತು "ಭದ್ರದೆ" ಯನ್ನು ಸೂಚಿಸುತ್ತವೆ.

ಉದಾ :—**रख छोड़ना** ಇಟ್ಟುಬಿಡುವುದು
**कर छोड़ना** ಮಾಡಿ ಬಿಡುವುದು
**कह रखना** ಹೇಳಿ ಇಟ್ಟಿರುವುದು
**दे रखना** ಕೊಟ್ಟಿಟ್ಟಿರುವುದು
**रोक रखना** ತಡೆದಿರುವುದು

60. ಸಂಯುಕ್ತ ಧಾತುವಿನ ಎರಡನೆಯ ಕ್ರಿಯೆಯು ಸಕರ್ಮಕವಾಗಿದ್ದರೆ ಅದು 'ने' ನಿಯಮವನ್ನನುಸರಿಸಬೇಕು.

ಸೂಚನೆ :—ನಿಷೇಧಾರ್ಥವನ್ನು ಸೂಚಿಸುವ ವಾಕ್ಯಗಳಲ್ಲಿ ಸಂಯುಕ್ತ ಕ್ರಿಯಾಪದಗಳನ್ನು ಉಪಯೋಗಿಸುವುದಿಲ್ಲ.

ಉದಾ :—वह नहीं खा गया ಎಂದು ಹೇಳುವುದು ತಪ್ಪು.

उसने नहीं खाया ಎಂದು ಹೇಳಬೇಕು.

**सूरज** ಸೂರ್ಯ

**तारा** ನಕ್ಷತ್ರ

**आसमान** ಆಕಾಶ

**दर्ज़ी** ದರ್ಜಿ, ಬಟ್ಟೆ ಹೊಲಿಯುವವ

**बिस्तर** ಹಾಸಿಗೆ

**मिज़ाज** ದೇಹಸ್ಥಿತಿ

**नौकर** ಸೇವಕ

**मुसाफ़िर** ಪ್ರಯಾಣಿಕ

**चोर** ಕಳ್ಳ

**चिंता करना** ಚಿಂತಿಸುವುದು, ಯೋಚನೆಮಾಡುವುದು

**तोड़ना** ಮುರಿಯುವುದು

**रखना** ಇಡುವುದು

**छोड़ना** ಬಿಡುವುದು

**दूर होना** ದೂರವಾಗುವುದು ಬಿಟ್ಟು ಹೋಗುವುದು

**साफ़-साफ़** ಸ್ವಚ್ಛವಾಗಿ

**चाँद** ಚಂದ್ರ ; **चाँदनी** ಬೆಳದಿಂಗಳು

**अँधेरा** ಕತ್ತಲು, ಅಂಧಕಾರ

**क़सूर** ಅಪರಾಧ, ದೋಷ

**कुर्ता** ಶರಟು, ಒಳಅಂಗಿ

**छड़ी** ಬೆತ್ತ

**क़र्ज़** ಸಾಲ

**व्यापार** ವ್ಯಾಪಾರ

**मुसाफ़िरख़ाना** ಛತ್ರ, ಪ್ರಯಾಣಿಕರು ಇಳಿದುಕೊಳ್ಳುವ ಸ್ಥಳ

**अदा करना** ಸಲ್ಲಿಸುವುದು, ಹಿಂದಕ್ಕೆ ಪಾವತಿಮಾಡುವುದು

**मारना** ಹೊಡೆಯುವುದು

**चौंकना** ಬೆಚ್ಚಿಬೀಳುವುದು

**सीना** ಹೊಲಿಯುವುದು

**दूर करना** ದೂರೀಕರಿಸುವುದು.

**एकदम** ಒಂದೇ ಸಮನೆ

छः वज गये, सूरज निकल आया, अंधेरा दूर हो गया, चलो, अव हम अपना काम करने चलें।

ಆರು ತಾಸು ಹೊಡೆಯಿತು, ಸೂರ್ಯನು ಉದಯಿಸಿದ, ಕತ್ತಲು ದೂರವಾಯಿತು, ನಡೆಯಿರಿ, ಈಗ ನಾವು ನಮ್ಮ ಕೆಲಸಗಳನ್ನು ಮಾಡಲಿಕ್ಕೆ ಹೊರಡೋಣ.

तुम्हें वहाँ कोई तकलीफ़ हो तो तुम मेरे घर चले आओ।

ನಿಮಗೆ ಅಲ್ಲಿ ಏನಾದರೂ ತೊಂದರೆಯಾದರೆ ನೀವು ನನ್ನ ಮನೆಗೆ ಬಂದುಬಿಡಿರಿ.

मैं तुम्हारी वातें सुनकर एकदम घवड़ा गया।

ನಾನು ನಿಮ್ಮ ಮಾತುಗಳನ್ನು ಕೇಳಿ ಬಹಳ ಗಾಬರಿಯಾದೆನು.

मैंने उनको तुम्हारे वारे में कुछ नहीं वताया; लेकिन वे सव वातें खुद जान गये।

ನಾನು ನಿಮ್ಮ ವಿಷಯವಾಗಿ ಅವರೊಡನೆ ಏನನ್ನೂ ಹೇಳಲಿಲ್ಲ, ಆದರೆ ಅವರು ಸ್ವತಃ ಎಲ್ಲಾ ವಿಷಯಗಳನ್ನೂ ತಿಳಿದುಕೊಂಡು ಬಿಟ್ಟರು.

कल तुम्हारी वहिन का मिज़ाज ठीक नहीं था, डाक्टर उसे देख गये थे।

ನಿನ್ನೆ ನಿಮ್ಮ ತಂಗಿಯ ದೇಹಸ್ಥಿತಿಯು ಚೆನ್ನಾಗಿರಲಿಲ್ಲ, ಡಾಕ್ಟರ್ ಅವಳನ್ನು ನೋಡಿ ಹೋಗಿದ್ದರು.

तुम अपना विस्तर कव ले गये?

ನೀವು ನಿಮ್ಮ ಹಾಸಿಗೆಯನ್ನು ಯಾವಾಗ ತೆಗೆದುಕೊಂಡು ಹೋದಿರಿ?

वह अपना काम करके चला गया।

ಅವನು ತನ್ನ ಕೆಲಸಮಾಡಿಕೊಂಡು ಹೋಗಿಬಿಟ್ಟನು.

मैंने उसके सव कर्ज़ अदा कर दिया है।

ನಾನು ಅವನ ಎಲ್ಲಾ ಸಾಲವನ್ನು ತೀರಿಸಿಬಿಟ್ಟೆನು.

दर्ज़ी ने मेरे दो कुर्ते सी दिये हैं।

ದರ್ಜಿಯು ನನ್ನ ಎರಡು ಷರಟುಗಳನ್ನು ಹೊಲೆದು ಕೊಟ್ಟಿದ್ದಾನೆ.

राम का नौकर मेरे वहुत काम कर देता है।

ರಾಮನ ಸೇವಕನು ನನ್ನ ಅನೇಕ ಕೆಲಸಗಳನ್ನು ಮಾಡಿಬಿಡುತ್ತಾನೆ.

उन्होंने अपनी घड़ी ले ली।

ಅವರು ತಮ್ಮ ಗಡಿಯಾರವನ್ನು ತೆಗೆದುಕೊಂಡುಬಿಟ್ಟರು.

| | |
|---|---|
| तुम चिन्ता मत करो, मैं यह काम ख़ुद कर लूँगा। | ನೀವು ಯೋಚಿಸಬೇಡಿ, ನಾನು ಈ ಕೆಲಸವನ್ನು ಸ್ವತಃ ಮಾಡಿಬಿಡುವೆನು. |
| कुछ चोरों ने मिलकर दो मुसाफ़िरों को मार डाला। | ಕೆಲವು ಕಳ್ಳರು ಸೇರಿ ಇಬ್ಬರು ಪ್ರಯಾಣಿಕರನ್ನು ಕೊಂದು ಹಾಕಿಬಿಟ್ಟರು. |
| उस शैतान लड़के ने मेरी छड़ी तोड़ डाली। | ಆ ತುಂಟ ಹುಡುಗನು ನನ್ನ ಬೆತ್ತವನ್ನು ಮುರಿದು ಹಾಕಿಬಿಟ್ಟನು. |
| मैं उस बूढ़े आदमी को देखकर एकदम चौंक पड़ा। | ನಾನು ಆ ಮುದುಕನನ್ನು ನೋಡಿ ಒಂದೇ ಸಮನೆ ಬೆಚ್ಚಿಬಿದ್ದೆನು. |
| देखो, आसमान में तारे देख पड़ते हैं। | ನೋಡು, ಆಕಾಶದಲ್ಲಿ ನಕ್ಷತ್ರಗಳು ಕಾಣಬರುತ್ತವೆ. |
| वे बूढ़े हो गये हैं, इसलिए उन्हें साफ़-साफ़ सुन नहीं पड़ता। | ಅವರು ಮುದುಕರಾಗಿ ಹೋಗಿರುವರು, ಆದುದರಿಂದ ಅವರಿಗೆ ಚೆನ್ನಾಗಿ ಕೇಳಿಸುವುದಿಲ್ಲ. |
| मुझे जान पड़ा कि वह इस देश का आदमी नहीं है। | ಅವನು ಈ ದೇಶದ ಮನುಷ್ಯನಲ್ಲವೆಂದು ನನಗೆ ಗೊತ್ತಾಯಿತು. |
| हमने तुमसे कुछ नहीं पूछा, तुम क्यों बोल उठे? | ನಾವು ನಿಮ್ಮೊಡನೆ ಏನನ್ನೂ ಕೇಳಿಲ್ಲ, ನೀವೇಕೆ ಮಾತಾಡಿಬಿಟ್ಟಿರಿ? |
| वह मुझे बिना क़सूर मार बैठा। | ಅವನು ನನ್ನನ್ನು ಅಪರಾಧವಿಲ್ಲದಿದ್ದರೂ ಹೊಡೆದುಬಿಟ್ಟ. |
| मैंने आपके लिए बीस आम रख छोड़े हैं। | ನಾನು ನಿಮಗಾಗಿ ಇಪ್ಪತ್ತು ಮಾವಿನ ಹಣ್ಣುಗಳನ್ನು ಇಟ್ಟಿರುತ್ತೇನೆ. |
| इस व्यापार में उसने बहुत नुक़सान उठाया। | ಅವನು ಈ ವ್ಯಾಪಾರದಲ್ಲಿ ಬಹಳ ನಷ್ಟ ಹೊಂದಿದನು. |
| इस व्यापार में उसने बहुत-से रुपये कमा रखे। | ಈ ವ್ಯಾಪಾರದಲ್ಲಿ ಅವನು ಬಹಳ ರೂಪಾಯಿಗಳನ್ನು ಸಂಪಾದಿಸಿಕೊಂಡನು. |

---

## ಪಾಠ 22

### ही ಶಬ್ದದ ಪ್ರಯೋಗ

61. ही ಎಂಬುದಕ್ಕೆ 'ಮಾತ್ರವೇ' ಎಂಬುದು ಸಾಮಾನ್ಯ ಅರ್ಥ. ಇದು ಹಿಂದಿಯಲ್ಲಿ ಒಂದು ಶಬ್ದವನ್ನು ಒತ್ತಿ ಹೇಳಬೇಕಾದರೆ ಬಹಳ ಉಪಯುಕ್ತವಾದ ಅವಧಾರಣಾಂಶವು. ಇದನ್ನು ಅನೇಕವಿಧ ಅರ್ಥಗಳನ್ನು ಸೂಚಿಸುವುದಕ್ಕಾಗಿ ಉಪಯೋಗಿಸುವುದುಂಟು. ಇದು ಯಾವ ಶಬ್ದದ ಮೇಲೆ 'ಅವಧಾರಣೆ' ಅಂದರೆ ಸ್ವರಭಾರವನ್ನಿಡಬೇಕೋ ಅದರ ಮುಂದೆ ಬರುತ್ತದೆ.

(1) ಸಾಧಾರಣವಾಗಿ ಇದು ಪ್ರತ್ಯೇಕಾರ್ಥವನ್ನು ತೋರಿಸುವುದಕ್ಕೆ 'ಮಾತ್ರ' ಎನ್ನುವ ಅರ್ಥದಲ್ಲಿ ಬರುತ್ತದೆ.

ಉದಾ :—मैं ही ನಾನೇ, ನಾನುಮಾತ್ರ
एक ही ಒಂದೇ, ಒಬ್ಬಮಾತ್ರ

ಸೂಚನೆ:—ಕೆಲವು ಸರ್ವನಾಮ ಮತ್ತು ಕ್ರಿಯಾವಿಶೇಷಣಗಳ ಮುಂದೆ ही ಎಂಬುದನ್ನು ಸೇರಿಸಿದರೆ ಅದು ಅವುಗಳಲ್ಲಿ ಬೆರತು ಹೋಗುತ್ತದೆ.

| | |
|---|---|
| तुम + ही = तुम्हीं ನೀವೇ | वह + ही = वही ಅವನೇ ಅಥವಾ ಅದೇ |
| हम + ही = हमीं ನಾವೇ | यह + ही = यही ಇವನೇ ಅಥವಾ ಇದೇ |
| उस + ही = उसी ಅದೇ | उन + ही = उन्हीं ಅವೇ ಅಥವಾ ಅವರೇ |
| इस + ही = इसी ಇದೇ | इन + ही = इन्हीं ಇವೇ ಅಥವಾ ಇವರೇ |
| किस + ही = किसी ಯಾವುದಾದರೂ | सब + ही = सभी ಎಲ್ಲರೂ |
| यहाँ + ही = यहीं ಇಲ್ಲೇ | वहाँ + ही = वहीं ಅಲ್ಲೇ |
| कहाँ + ही = कहीं ಎಲ್ಲೋ | तब + ही = तभी ಆಗಲೇ |

(2) ವರ್ತಮಾನಕಾಲಿಕ ಕೃದಂತದ ಜೊತೆಯಲ್ಲಿ ಸೇರಿಸಿದರೆ "ತಕ್ಷಣವೇ" ಎನ್ನುವ ಅರ್ಥವನ್ನು ಸೂಚಿಸುತ್ತದೆ.

ಉದಾ:—मेरे पहुँचते ही वह चला गया ನಾನು ತಲಪಿದ ಕೂಡಲೇ ಅವನು ಹೊರಟುಹೋದನು.

उसके आते ही मैं चुप हो गया ಅವನು ಬಂದಕೂಡಲೇ ನಾನು ಸುಮ್ಮನಾದೆನು.

ಇಲ್ಲಿ ಷಷ್ಠೀ ವಿಭಕ್ತಿಯ ಪ್ರಯೋಗವನ್ನು ಗಮನಿಸಬೇಕು.

(3) ಯಾವುದೇ ಕಾಲದಲ್ಲಾಗಲಿ ಇದನ್ನು ಕ್ರಿಯಾಪದಕ್ಕೆ ಸೇರಿಸಿದರೆ ಕ್ರಿಯೆಯು ದೃಢೀಕರಿಸ (emphasise) ಲ್ಪಡುತ್ತದೆ.

ಉದಾ:—मैं गया ही ನಾನು ಹೋಗೇ ಹೋದೆ.
वे जाएँगे ही ಅವರು ಹೋಗೇ ಹೋಗುವರು.

(4) ಸಂಬಂಧವಾಚಕ (relative) ಸರ್ವನಾಮದ ಜೊತೆಯಲ್ಲಿ ही ಉಪಯೋಗಿಸಿದರೆ 'ಅದೇ' ಎಂಬರ್ಥವನ್ನು ಕೊಡುವುದು.

ಉದಾ:—यह वही आदमी है जिसे तुमने कल देखा ನಿನ್ನೆ ಯಾರನ್ನು ನೀವು ನೋಡಿದಿರೋ ಆ ಮನುಷ್ಯನೇ ಇವನು.

(5) ही ಎಂಬುದನ್ನು "ಆಗ" "ಆಗಲೇ" ಎಂಬರ್ಥವನ್ನು ಸೂಚಿಸುವ ಸಂಬಂಧವಾಚಕ ಕ್ರಿಯಾವಿಶೇಷಣವಾಗಿಯೂ ಉಪಯೋಗಿಸುವರು.

ಉದಾ:—मैं स्टेशन जा ही रहा था कि गाड़ी निकल गयी ನಾನು ಸ್ಟೇಶನಿಗೆ ಹೋಗುತ್ತಿರುವಾಗಲೇ ಗಾಡಿಯು ಹೊರಟು ಹೋಯಿತು.

वे बोल ही रहे थे कि लोग उठकर चले गये ಅವರು ಮಾತಾಡುತ್ತಿರುವಾಗಲೇ (ಮಾತಾಡುತ್ತಿದ್ದಹಾಗೆಯೇ) ಜನರು ಎದ್ದು ಹೊರಟುಹೋದರು.

लोग खा ही रहे थे कि पानी बरसने लगा ಜನರು ಊಟ ಮಾಡುತ್ತಿರುವಾಗಲೇ ಮಳೆ ಸುರಿಯಲಾರಂಭಿಸಿತು.

गरमी (ಸ್ತ್ರೀ) ಉಷ್ಣ
बरसात (ಸ್ತ್ರೀ) ಮಳೆಗಾಲ
पहाड़ ಬೆಟ್ಟ
मुँह ಬಾಯಿ
अंग्रेज़ ಆಂಗ್ಲೇಯ
अंग्रेज़ी ಆಂಗ್ಲಭಾಷೆ
संतान (ಸ್ತ್ರೀ) ಮಕ್ಕಳು
कम ಕಡಿಮೆ
मनुष्य ಮನುಷ್ಯ
खुलना (ಅಕ.) ತೆರೆ, ಹೊರಡು
बल्कि ಆದರೆ
उड़ ಹಾರು
दर्ज़ी ಸಿಂಪಿಗ, ದರ್ಜಿ
जाड़ा ಚಳಿ, ಚಳಿಗಾಲ
मौसिम ಋತು
बरफ़ (ಸ್ತ್ರೀ) ಮಂಜುಗಡ್ಡೆ
वाक्य ವಾಕ್ಯ
अछूत ಅಸ್ಪೃಶ್ಯ
मतलब ಅಭಿಪ್ರಾಯ, ಅರ್ಥ
पक्षी (ಪು) चिड़िया (ಸ್ತ್ರೀ) ಹಕ್ಕಿ
ज़्यादा ಹೆಚ್ಚು
जूता ಜೋಡು
रोकना ತಡೆಯುವುದು
तो भी ಹಾಗಾದರೂ
टोपी ಟೋಪಿ, ಕುಲಾವಿ
पैदा होना ಹುಟ್ಟುವುದು
सादा ಸರಳವಾದ, ಸಾದಾ

| | |
|---|---|
| आप ही का नाम रामदास है ? | ತಮ್ಮದೇಯೋ ಹೆಸರು 'ರಾಮದಾಸ' ಎಂದು ? |
| जी हाँ, मेरा ही नाम है। | ಹೌದು ಸ್ವಾಮಿ, ನನ್ನ ಹೆಸರೇ. |
| आप आजकल यहीं इसी शहर में रहते हैं? | ಪ್ರಸ್ತುತ ತಾವು ಇಲ್ಲಿಯೋ ಇದೇ ಪಟ್ಟಣದಲ್ಲಿ ವಾಸಮಾಡುತ್ತೀರೊ ? |
| हाँ, मैं क़रीब छः महीने से यहीं रहता हूँ। | ಹೌದು, ನಾನು ಸುಮಾರು ಆರು ತಿಂಗಳಿಂದ ಇಲ್ಲಿಯೋ ವಾಸಮಾಡುತ್ತೇನೆ. |
| गरमी के मौसिम में सभी लोग पहाड़ों पर जाकर रहते हैं। | ಬೇಸಿಗೆಯಲ್ಲಿ ಎಲ್ಲಾ ಜನರೂ ಬೆಟ್ಟಗಳ ಮೇಲೆ ಹೋಗಿ ವಾಸಿಸುತ್ತಾರೆ. |

| | |
|---|---|
| जाड़े में कहीं-कहीं बरफ़ भी गिरती है। | ಚಳಿಗಾಲದಲ್ಲಿ ಅಲ್ಲಲ್ಲಿ (ಕೆಲವು ಸ್ಥಳಗಳಲ್ಲಿ) ಮಂಜೂ ಬೀಳುತ್ತದೆ. |
| मैं अपने को किसी तरह उनसे कम मज़बूत नहीं समझता। | ನಾನು ನನ್ನನ್ನು ಅವರಿಗಿಂತ ಯಾವ ವಿಧದಲ್ಲಿಯೂ ಕಡಿಮೆ ಬಲಶಾಲಿಯೆಂದು ತಿಳಿಯುವುದಿಲ್ಲ. |
| वह आजकल उसी मकान में रहता है, जिसमें मैं दो वर्ष पहले रहता था। | ನಾನು ಎರಡು ವರ್ಷಗಳ ಹಿಂದೆ ವಾಸಮಾಡುತ್ತಿದ್ದ ಮನೆಯಲ್ಲಿಯೇ ಅವನು ಇತ್ತೀಚೆಗೆ ವಾಸಮಾಡುತ್ತಾನೆ. |
| मेरा ख़याल है कि वे दस दिन के अंदर ही लौट आएँगे। | ಅವರು ಇನ್ನು ಹತ್ತು ದಿನಗಳೊಳಗಾಗಿಯೇ ಹಿಂತಿರುಗಿ ಬರುತ್ತಾರೆಂದು ನಾನು ಊಹಿಸುತ್ತೇನೆ. |
| मेरे स्टेशन पर पहुँचते ही गाड़ी खुल गयी। | ನಾನು ಸ್ಟೇಷನನ್ನು ಸೇರುತ್ತಲೇ (ರೈಲು) ಗಾಡಿಯು ಹೊರಟಿತು. |
| उसके मुँह से बात निकलते ही मैंने उसे रोक दिया। | ಅವನ ಬಾಯಿಯಿಂದ ಮಾತು ಹೊರಡುತ್ತಲೇ ನಾನು ಅವನನ್ನು ತಡೆದುಬಿಟ್ಟೆನು. |
| अगर अंग्रेज़ हिन्दुस्तान में न आते, तो हिन्दुस्तान की हालत कुछ और ही होती। | ಆಂಗ್ಲೇಯರು ಹಿಂದೂದೇಶಕ್ಕೆ ಬಾರದೆ ಇದ್ದಿದ್ದರೆ ಹಿಂದೂದೇಶದ ಸ್ಥಿತಿ ಬೇರೆಯೇ ಆಗಿರುತ್ತಿತ್ತು. |
| इस वाक्य का मतलब वह नहीं है जो तुम समझते हो, बल्कि कुछ और ही है। | ಈ ವಾಕ್ಯದ ಅರ್ಥವು ನೀವು ತಿಳಿದುಕೊಂಡಿರುವಂತೆ ಅಲ್ಲ; ಆದರೆ ಅದು ಬೇರೆಯೇ ಆಗಿದೆ. |
| यह काम ही वह नहीं कर सकता, तुम उसे ज़्यादा काम क्यों देते हो? | ಈ ಕೆಲಸವನ್ನೇ ಅವನು ಮಾಡಲಾರನು, ನೀವು ಏತಕ್ಕೆ ಅವನಿಗೆ ಹೆಚ್ಚು ಕೆಲಸವನು ಕೊಡುತ್ತೀರಿ? |

| | |
|---|---|
| यह वही घर है जिसमें मैं कई वर्ष पहले आया करता था। | ನಾನು ಬಹಳ ವರ್ಷಗಳ ಹಿಂದೆ ಬರುತ್ತಾ ಇದ್ದ ಮನೆಯೇ ಇದಾಗಿದೆ. |
| अछूत भी उसी ईश्वर की संतान हैं, जिसकी संतान ब्राह्मण हैं। | ಬ್ರಾಹ್ಮಣರು ಯಾವ ದೇವರ ಮಕ್ಕಳೋ ಅಸ್ಪೃಶ್ಯರೂ ಅದೇ ದೇವರ ಮಕ್ಕಳಾಗಿದ್ದಾರೆ. |
| मैंने उसे बहुत मना किया, तो भी वह लड़ाई पर गया ही। | ನಾನು ಅವನನ್ನು ಬಹಳ ತಡೆದೆನು, ಆದಾಗ್ಯೂ ಅವನು ಯುದ್ಧಕ್ಕೆ ಹೋಗಿಯೇ ಹೋದನು. |
| तुम जाओ या नहीं, मैं जाऊँगा ही। | ನೀವು ಬಂದರೂ ಬಾರದೆ ಇದ್ದರೂ ನಾನು ಹೋಗಿಯೇ ಹೋಗುವೆನು. |
| उसी दर्ज़ी ने यह टोपी सी है जो तुम्हारे कपड़े सीता है। | ನಿಮ್ಮ ಬಟ್ಟೆಗಳನ್ನು ಹೊಲಿಯುವ ಸಿಂಪಿಗನೇ ಈ ಟೋಪಿಯನ್ನೂ ಹೊಲಿದಿರುವನು. |
| पक्षी ही उड़ सकते हैं, मनुष्य नहीं उड़ सकते। | ಪಕ್ಷಿಗಳು ಮಾತ್ರ ಹಾರಬಲ್ಲವು, ಮನುಷ್ಯ ಹಾರಲಾರ. |
| यह वही देश है जिसमें श्रीराम और श्रीकृष्ण पैदा हुए। | ಶ್ರೀರಾಮ ಮತ್ತು ಶ್ರೀಕೃಷ್ಣರು ಹುಟ್ಟಿದ್ದ ನಾಡೇ ಇದಾಗಿದೆ. |
| ईश्वरचन्द्र विद्यासागर हमेशा सादे कपड़े ही पहनते थे। | ಈಶ್ವರಚಂದ್ರ ವಿದ್ಯಾಸಾಗರರು ಯಾವಾಗಲೂ ಸಾಧಾರಣ ಉಡುಪನ್ನೇ ಧರಿಸುತ್ತಿದ್ದರು. |

## ಪಾಠ 23

## ಆವಶ್ಯಕತಾಬೋಧಕ ಕ್ರಿಯೆಗಳು

### ಒತ್ತಾಯ, ಆವಶ್ಯಕತೆ ಮತ್ತು ಹಂಗು

62. 'ಒತ್ತಾಯ' ವನ್ನು ತಿಳಿಸಬೇಕಾದರೆ ಧಾತುವಿನ ಭಾವರೂಪದ ಜೊತೆಗೆ 'पड़ना' ಎಂಬುದನ್ನು ಸೇರಿಸಬೇಕು. ಆಗ ಕರ್ತೃವು ಚತುರ್ಥೀ ವಿಭಕ್ತಿಯಲ್ಲಿದ್ದು ಕ್ರಿಯಾಪದವು ಕರ್ಮಪದದ, ವಚನ ಲಿಂಗಗಳನ್ನು ಅನುಸರಿಸುವುದು.

ಉದಾ :—मुझे कलकत्ता जाना पड़ा ನಾನು ಕಲ್ಕತ್ತೆಗೆ ಹೋಗಬೇಕಾಯಿತು.

उसे रोटियाँ खानी पड़ीं ಅವನು ರೊಟ್ಟಿಗಳನ್ನು ತಿನ್ನಬೇಕಾಯಿತು.

मुझे दस रुपये दंड देने पड़े ನಾನು ಹತ್ತುರೂಪಾಯಿ ಜುಲ್ಮಾನೆ ಕೊಡಬೇಕಾಯಿತು.

63. ಯಾವುದಾದರೂ ಕಾರ್ಯದ ಆವಶ್ಯಕತೆಯನ್ನು ತಿಳಿಸುವುದಕ್ಕೆ ಭಾವರೂಪದ ಜೊತೆಯಲ್ಲಿ (ಕಾಲಗಳನ್ನನುಸರಿಸಿ) 'होगा' 'है', ಮತ್ತು 'था' ಇವುಗಳನ್ನುಪಯೋಗಿಸಬೇಕು. ಆಗ ಕರ್ತೃಪದವು ಚತುರ್ಥೀವಿಭಕ್ತಿಯಲ್ಲೂ ಕ್ರಿಯಾಪದವು ಕರ್ಮಪದವನ್ನು ಅನುಸರಿಸಿಯೂ ಇರಬೇಕು.

ಉದಾ :—मुझे जाना होगा ನಾನು ಹೋಗಬೇಕಾಗುವುದು.

मुझे जाना है ನಾನು ಹೋಗಬೇಕಾಗಿದೆ.

मुझे पाँच रुपये देने हैं ನಾನು ಐದು ರೂಪಾಯಿ ಕೊಡಬೇಕಾಗಿದೆ.

मुझे जाना था ನಾನು ಹೋಗಬೇಕಾಗಿತ್ತು.

मुझे एक चिट्ठी लिखनी थी ನಾನು ಒಂದು ಕಾಗದ ಬರೆಯಬೇಕಾಗಿತ್ತು.

ಸೂಚನೆ :—'पढ़ना' ಎಂಬುದು 'होगा' ಕ್ಕಿಂತ ಹೆಚ್ಚು ಒತ್ತಾಯ ವನ್ನು ತಿಳಿಸುತ್ತದೆ.

64. 'ಬೇಕು' ಎನ್ನುವುದಕ್ಕೆ 'चाहिए' 'ಬೇಕಾಗಿತ್ತು' ಎನ್ನುವುದಕ್ಕೆ 'चाहिए था' ಎಂಬವುಗಳನ್ನು ಭಾವರೂಪದ ಜೊತೆಯಲ್ಲಿ ಉಪಯೋಗಿಸಿ ಕರ್ತೃವನ್ನು ಚತುರ್ಥಿಯಲ್ಲೂ ಕ್ರಿಯಾಪದವನ್ನು ಕರ್ಮಪದಕ್ಕನುಸಾರವಾಗಿಯೂ ಉಪಯೋಗಿಸಬೇಕು.

ಉದಾ :—तुमको यह काम करना चाहिए ನೀವು ಈ ಕೆಲಸ ಮಾಡಬೇಕು.

तुमको वहाँ जाना चाहिए था ನೀವು ಅಲ್ಲಿಗೆ ಹೋಗಬೇಕಾಗಿತ್ತು.

उसको वह पुस्तक ज़रूर पढ़नी चाहिए थी ಅವನು ಆ ಪುಸ್ತಕವನ್ನು ಅಗತ್ಯವಾಗಿ ಓದಬೇಕಾಗಿತ್ತು.

उसे दवा खानी चाहिए ಅವನು ಔಷಧಿ ಸೇವಿಸಬೇಕು.

हवा ಗಾಳಿ (ಸ್ತ್ರೀ)
ज़बान (ಸ್ತ್ರೀ) ಮಾತು, ಭಾಷೆ
तक्लीफ़ ಕಷ್ಟ
मेहमान ಅತಿಥಿ
देश, मुल्क ದೇಶ
मौत (ಸ್ತ್ರೀ) ಮರಣ
विषय ವಿಷಯ
विषय में ವಿಷಯವಾಗಿ
जीवन ಜೀವನ
परवाह करना ಲಕ್ಷ್ಯಮಾಡುವುದು
ग़लती करना ತಪ್ಪುಮಾಡುವುದು
बादल ಮೋಡ
कारण ಕಾರಣ
मैदान ಮೈದಾನ
दावत (ಸ್ತ್ರೀ) ಔತಣ
धर्म ಧರ್ಮ, ಕರ್ತವ್ಯ
सभा (ಸ್ತ್ರೀ) ಸಭೆ
भूल, ग़लती (ಸ್ತ್ರೀ) ತಪ್ಪು
सहना ಸಹಿಸುವುದು
बनना ತಯಾರಾಗುವುದು, ಮಾಡಲಾಗುವುದು
मर मिटना ಸತ್ತುಹೋಗುವುದು
शामिल होना ಸೇರು, ಸೇರಿಕೊಳ್ಳುವುದು

| | |
|---|---|
| मुझे हफ़्ते में दो बार वहाँ जाना पड़ता है। | ನಾನು ವಾರದಲ್ಲಿ ಎರಡು ಬಾರಿ ಅಲ್ಲಿಗೆ ಹೋಗ ಬೇಕಾಗುತ್ತದೆ. |
| मुझे उसके साथ तेलुगु में बोलना पड़ा; क्योंकि वह दूसरी कोई ज़बान नहीं जानता था। | ನಾನು ಅವನ ಸಂಗಡ ತೆಲುಗಿನಲ್ಲಿ ಮಾತನಾಡ ಬೇಕಾಯಿತು, ಏತಕ್ಕೆಂದರೆ ಅವನಿಗೆ ಇತರ ಯಾವ ಭಾಷೆಯೂ ಗೊತ್ತಿದ್ದಿಲ್ಲ. |
| उसको मेरे कारण बहुत तकलीफ़ें सहनी पड़ीं। | ಅವನು ನನಗೋಸ್ಕರ ಬಹಳ ಕಷ್ಟಗಳನ್ನು ಸಹಿಸಬೇಕಾಯಿತು. |
| तुम्हें किसी बात की परवाह न करके लड़ाई में शामिल होना पड़ेगा। | ನೀವು ಯಾವುದನ್ನೂ ಲಕ್ಷಿಸದೆ ಯುದ್ಧದಲ್ಲಿ ಭಾಗಿಯಾಗ ಬೇಕಾಗುವುದು. |
| आज मुझे अपने एक मेहमान को दावत देनी है। | ಇವತ್ತು ನಾನು ನನ್ನ ಒಬ್ಬ ಅತಿಥಿಗೆ ಔತಣ ಮಾಡಿಸಬೇಕಾಗಿದೆ. |
| हमें अपने देश और धर्म के लिए मर मिटना होगा। | ನಾವು ನಮ್ಮ ದೇಶ ಮತ್ತು ಧರ್ಮಕ್ಕಾಗಿ ಸಾಯಬೇಕಾಗುವುದು. |
| उन्हें अपने जीवन में बड़े-बड़े काम करने थे, लेकिन मौत ने ऐसा होने न दिया। | ಅವರು ತಮ್ಮ ಜೀವಮಾನದಲ್ಲಿ ದೊಡ್ಡ ದೊಡ್ಡ ಕೆಲಸಗಳನ್ನು ಮಾಡಬೇಕಾಗಿತ್ತು, ಆದರೆ ಮರಣವು ಹಾಗಾಗುವುದಕ್ಕೆ ಬಿಡಲಿಲ್ಲ. |
| हमें अपने देश की बनी हुई चीज़ों का ही इस्तेमाल करना चाहिए। | ನಾವು ಸ್ವದೇಶದಲ್ಲಿ ತಯಾರಾದ ಸಾಮಾನುಗಳನ್ನೇ ಉಪಯೋಗಿಸಬೇಕು. |
| हर एक हिन्दुस्तानी को हिन्दी जाननी चाहिए। | ಪ್ರತಿಯೊಬ್ಬ ಭಾರತೀಯನೂ ಹಿಂದೀ ಭಾಷೆಯನ್ನು ತಿಳಿದಿರಬೇಕು. |
| तुम्हें भी उस सभा में इस विषय पर ज़रूर कुछ बोलना चाहिए था। | ಆ ಸಭೆಯಲ್ಲಿ ನೀವುಕೂಡ ಈ ವಿಷಯದಲ್ಲಿ ಏನಾದರೂ ಅಗತ್ಯವಾಗಿ ಮಾತನಾಡ ಬೇಕಾಗಿತ್ತು. |

| | |
|---|---|
| मैंने ग़लती की, मुझे पहले से ही उनके विषय में सब बातें समझ लेनी चाहिए थीं। | ನಾನು ತಪ್ಪುಮಾಡಿದೆ; ನಾನು ಮೊದಲೇ ಅವನ ವಿಚಾರವಾಗಿ ಎಲ್ಲವನ್ನೂ ತಿಳಿದುಕೊಳ್ಳಬೇಕಾಗಿತ್ತು. |
| क्या करूँ? अपनी इच्छा के विरुद्ध ही यह काम करना पड़ता है। | ಏನುಮಾಡಲಿ! ನಾನು ಈ ಕೆಲಸವನ್ನು ನನ್ನ ಮನಸ್ಸಿಗೆ ವಿರುದ್ಧವಾಗಿಯೇ ಮಾಡಬೇಕಾಗಿದೆ. |
| मैंने बिलकुल सोचा ही नहीं कि ये सभी काम मुझको ही करने पड़ेंगे। | ನಾನೇ ಈ ಕೆಲಸಗಳನ್ನೆಲ್ಲಾ ಮಾಡಬೇಕಾಗುವುದೆಂದು ನಾನು ಖಂಡಿತ ಯೋಚಿಸಲೇ ಇಲ್ಲ. |

---

## ಪಾಠ 24

### ಕರ್ತರಿನಾಮಪದ; ಗುಣವಾಚಕಗಳ ತಾರತಮ್ಯ

65. 'वाला' ಎಂಬ ಪ್ರತ್ಯಯವು ಹಿಂದಿಯಲ್ಲಿ ಸಾಮಾನ್ಯವಾಗಿ ಉಪಯೋಗಿಸಲ್ಪಡುವುದು. ಬೇರೆಬೇರೆ ಪದಗಳ ಜೊತೆಯಲ್ಲಿ ಇದರ ಅರ್ಥವು ಬೇರೆಬೇರೆಯಾಗುವುದು. ಅದರ ಉಪಯೋಗಗಳನ್ನು ಕೆಳಗೆ ಕೊಟ್ಟಿದೆ:—

(1) ರೂಪಾಂತರ ಹೊಂದಿದ ಭಾವರೂಪದ ಜೊತೆಯಲ್ಲಿ ಸೇರಿದರೆ:—

(ಅ) ಕನ್ನಡದಲ್ಲಿನ "ಅವ" ಎಂಬ ಪದಾಂತ್ಯ ಪ್ರತ್ಯಯಕ್ಕೆ ಸಮಾನವಾದದ್ದು.

ಉದಾ:—बोलनेवाला ಮಾತಾಡುವವ

(ಆ) ಆಸನ್ನ ಭವಿಷ್ಯದರ್ಥವನ್ನು ಸೂಚಿಸುತ್ತದೆ.

ಉದಾ:—वह आज आनेवाला है ಅವನು ಇಂದು ಬರುವವನಿದ್ದಾನೆ.

(2) ನಾಮಪದಕ್ಕೆ ಸೇರಿಸಿದರೆ ಅದರ ಅರ್ಥವು—

(ಅ) ಸ್ವಾಮ್ಯವನ್ನು ಸೂಚಿಸುತ್ತದೆ.

ಉದಾ :—मकानवाला ಮನೆಯ ಯಜಮಾನ
गाड़ीवाला ಗಾಡಿಯ ಯಜಮಾನ
पैसेवाला ಧನಿಕ

(ಆ) ಬೆಲೆಯನ್ನು ಸೂಚಿಸುತ್ತದೆ.

ಉದಾ :—पाँच रुपयेवाली किताब ಐದು ರೂಪಾಯಿ ಬೆಲೆಯ ಪುಸ್ತಕ

(ಇ) ಒಂದು ಪದಾರ್ಥದಿಂದ ಮಾಡಿರುವಿಕೆಯನ್ನು ಸೂಚಿಸುತ್ತದೆ.

ಉದಾ :—पत्थरवाला घर ಕಲ್ಲಿನ ಮನೆ

(ಈ) ಮಾರುವವನನ್ನು ಸೂಚಿಸುತ್ತದೆ.

ಉದಾ :—दूधवाला ಹಾಲುಮಾರುವವ
रोटीवाला ರೊಟ್ಟಿಮಾರುವವ
तस्वीरवाली ಭಾವ ಚಿತ್ರಗಳನ್ನು, ಮಾರುವವಳು

(3) ಕ್ರಿಯಾವಿಶೇಷಣ ಅಥವಾ ಸ್ಥಳಗಳ ಹೆಸರಿನ ಮುಂದೆ ಸೇರಿದರೆ "ಸ್ಥಾನ" ಅಥವಾ "ವಾಸ" ವನ್ನು ಸೂಚಿಸುವುದು—

ಉದಾ :—ऊपरवाला कमरा ಮೇಲಿನ ಕೋಣೆ
मद्रासवाला आदमी ಮದ್ರಾಸಿನ ಮನುಷ್ಯ

66. 'वाला' ಎಂಬುದು ಗುಣವಾಚಕ ಪ್ರತ್ಯಯವಾದ್ದರಿಂದ "आ, ए, ई" ನಿಯಮದಂತೆ ಬದಲಾವಣೆಯನ್ನು ಹೊಂದುತ್ತದೆ.

ಉದಾ :—बोलनेवाला आदमी ಮಾತಾಡುವ ಮನುಷ್ಯ
बोलनेवाली औरत ಮಾತಾಡುವ ಹೆಂಗಸು
बोलनेवाले आदमी ಮಾತಾಡುವ ಮನುಷ್ಯರು

## ಗುಣವಾಚಕಗಳ ತರ-ತಮ ರೂಪ

67. ಎರಡು ಪದಾರ್ಥಗಳನ್ನು ಹೋಲಿಸಬೇಕಾದರೆ ಯಾವ ನಾಮ ಪದಕ್ಕೆ ಹೋಲಿಸಬೇಕೋ ಅದಕ್ಕೆ "से (ಗಿಂತ)" ಎನ್ನುವುದನ್ನು ಸೇರಿಸ ಬೇಕು. "ತಮ" ಸೂಚಕ ಪ್ರತ್ಯಯವನ್ನು ಸೇರಿಸಲು "सब से (ಎಲ್ಲ ಕ್ಕಿಂತ)" ಎನ್ನುವುದನ್ನು ಉಪಯೋಗಿಸಬೇಕು.

ಉದಾ:—यह घर उस घर से बड़ा है ಈ ಮನೆ ಆ ಮನೆಗಿಂತ ದೊಡ್ಡದು.

यह घर सब से बड़ा है ಈ ಮನೆ ಎಲ್ಲಕ್ಕಿಂತ ದೊಡ್ಡದು.

68. ಹೋಲಿಸಲ್ಪಡುವ ನಾಮಪದವನ್ನು ಉಲ್ಲೇಖಿಸದಿದ್ದಾಗ "ತಮ" ಅಂದರೆ ಉತ್ಕೃಷ್ಟತೆಯನ್ನು ಸೂಚಿಸಬೇಕಾದರೆ ವಿಶೇಷಣವನ್ನು ಎರಡಾವರ್ತಿ ಉಪಯೋಗಿಸಿ ಮಧ್ಯೆ से ಎನ್ನುವುದನ್ನು ಸೇರಿಸಬೇಕು.

ಉದಾ:—अच्छे से अच्छा आदमी ಅತ್ಯುತ್ತಮ ಮನುಷ್ಯನು.

कठिन से कठिन काम ಬಹು ಕಠಿಣವಾದ ಕೆಲಸ.

बड़े से बड़े ಅತಿ ದೊಡ್ಡದು.

'बढ़कर' ಎಂಬುದು ಹೋಲಿಕೆಯನ್ನು ತೋರಿಸತಕ್ಕ ವಾಗ್ಧಾರೆ ಯಾಗಿದೆ.

ಉದಾ:—यह मुझसे बहुत बढ़कर है ಇವನು ನನಗಿಂತ ಎಷ್ಟೋ ಉತ್ತಮನು.

सूरदास से बढ़कर हिन्दी में कोई कवि नहीं है ಹಿಂದಿಯಲ್ಲಿ ಸೂರದಾಸನಿಗಿಂತ ದೊಡ್ಡ ಕವಿ ಇಲ್ಲ.

इससे बढ़कर बुरा काम कोई नहीं ಇದಕ್ಕಿಂತ ಹೆಚ್ಚಿನ ಕೆಟ್ಟ ಕೆಲಸವು ಯಾವುದೂ ಇಲ್ಲ.

'ज़्यादा' ಮತ್ತು 'कम' ಎಂಬುವು ಹೋಲಿಕೆಯನ್ನು ತೋರಿಸುವಾಗ ವಿಶೇಷಣ ಪದಕ್ಕೆ ಮೊದಲು ಪ್ರಯೋಗಿಸಲ್ಪಡುತ್ತದೆ.

ಉದಾ:—कम सुन्दर ಕಡಿಮೆ ಸುಂದರವಾದ

ज़्यादा मज़बूत ಹೆಚ್ಚು ಬಲವುಳ್ಳ

यह उससे ज़्यादा अच्छा है ಇದು ಅದಕ್ಕಿಂತ ಹೆಚ್ಚು ಒಳ್ಳೆಯದು.

गाना ಹಾಡುವುದು
उड़ना ಹಾರುವುದು
बिकना ಮಾರಿಹೋಗುವುದು
बेचना ಮಾರುವುದು
विश्वास, यक़ीन करना ನಂಬುವುದು
शिकायत करना ದೂರು ಹೇಳುವುದು
तारीफ़ करना ಹೊಗಳುವುದು
होशियार रहना ಎಚ್ಚರಿಕೆಯಿಂದಿರುವುದು
प्रांत, सूबा ಪ್ರಾಂತ್ಯ
अंग्रेज़ी ಇಂಗ್ಲೀಷ್ ಭಾಷೆ
संख्या ಸಂಖ್ಯೆ
व्याख्यान ಭಾಷಣ
मौक़ा ಸಂದರ್ಭ, ಅವಕಾಶ
पार ದಡ, ಆಚೆದಡ
सौ ನೂರು
पचास ಐವತ್ತು
पुस्तकालय ಪುಸ್ತಕಾಲಯ
पत्थर ಕಲ್ಲು
पड़ोसी ಪಕ್ಕದ ಮನೆಯವನು, ನೆರೆಯವನು
मालिक ಯಜಮಾನ, ಮಾಲಿಕ
टोपी ಟೋಪಿ
गली ಬೀದಿ
अंगूठी ಉಂಗುರ
सोना ಬಂಗಾರ
विश्वास, यकीन ನಂಬಿಕೆ
तारीफ़ ಹೊಗಳಿಕೆ
रेलगाड़ी ರೈಲುಬಂಡಿ
मुसाफ़िर ಪ್ರಯಾಣಿಕ
हवाई जहाज़ ವಾಯು ವಿಮಾನ
पैरगाड़ी ಬೈಸಿಕಲ್
इमारत ಕಟ್ಟಡ, ಬಂಗಲೆ

| | |
|---|---|
| नाव ದೋಣಿ | बग़ल ಪಕ್ಕ, ನೆರೆ |
| सच्चा ನಿಜವಾದ | जहाज़ ಹಡಗು |
| बढ़कर ಹೆಚ್ಚಾಗಿ | झूठा ಸುಳ್ಳಾದ |
| बेहतर ಉತ್ತಮ | खट्टा ಹುಳಿಯಾದ |

| | |
|---|---|
| इस प्रांत में अंग्रेज़ी जाननेवालों की संख्या बहुत कम है। | ಈ ಪ್ರಾಂತ್ಯದಲ್ಲಿ ಇಂಗ್ಲೀಷ್ ತಿಳಿದಿರುವವರ ಸಂಖ್ಯೆಯು ಬಹಳ ಕಡಿಮೆ ಇದೆ. |
| मैं ख़ूब जानता हूँ कि वह बड़ा खानेवाला है। | ಅವನು ದೊಡ್ಡ ತಿಂಡಿಪೋತನೆಂದು ನಾನು ಚೆನ್ನಾಗಿ ಬಲ್ಲೆ. |
| आज उनके यहाँ दो गानेवाले आये हैं। | ಈದಿನ ಇಬ್ಬರು ಸಂಗೀತಗಾರರು ಅವರ ಮನೆಗೆ ಬಂದಿದ್ದಾರೆ. |
| कलवाली सभा में मैं भी व्याख्यान देनेवाला था, लेकिन मुझे मौक़ा नहीं मिला। | ನಿನ್ನೆಯ ಸಭೆಯಲ್ಲಿ ನಾನೂ ಕೂಡ ಮಾತಾಡುವವನಿದ್ದೆ, ಆದರೆ ನನಗೆ ಅವಕಾಶ ಸಿಕ್ಕಲಿಲ್ಲ. |
| पचास रुपयेवाली घड़ी उतना ही काम देती है जितना सौ रुपयेवाली। | ಐವತ್ತು ರೂಪಾಯಿಗಳ ಗಡಿಯಾರವು ಕೂಡ ನೂರು ರೂಪಾಯಿಗಳ ಗಡಿಯಾರದಷ್ಟೇ ಪ್ರಯೋಜನಕಾರಿಯಾಗಿದೆ. |
| नदी के उस पारवाला मकान अडयार का पुस्तकालय है। | ನದಿಯ ಆಚೆ ದಡದ ಮೇಲಿರುವ ಮನೆಯು ಅಡಯಾರಿನ ಪುಸ್ತಕಾಲಯವಾಗಿದೆ. |
| उस पत्थरवाले मकान का मालिक मेरा पड़ोसी है। | ಆ ಕಲ್ಲಿನ ಮನೆಯ ಯಜಮಾನನು ನನ್ನ ನೆರೆಯವನು. |
| हम बग़लवाली गली में रहते हैं। | ನಾವು ಪಕ್ಕದ ಬೀದಿಯಲ್ಲಿ ವಾಸಮಾಡುತ್ತೇವೆ. |
| वह टोपीवाला मुसाफ़िर दिल्ली का रहनेवाला है। | ಟೋಪಿಯನ್ನಿಟ್ಟುಕೊಂಡಿರುವ ಆ ಪ್ರಯಾಣಿಕನು ದಿಲ್ಲಿಯ ನಿವಾಸಿಯಾಗಿದ್ದಾನೆ. |

| | |
|---|---|
| उस सोनेवाली अंगूठी की क्या क़ीमत है? | ಆ ಬಂಗಾರದ ಉಂಗುರದ ಬೆಲೆ ಏನು? |
| हमें झूठी तारीफ़ करनेवालों की बात का कभी यक़ीन नहीं करना चाहिए। | ಸುಳ್ಳಾಗಿ ಹೊಗಳುವವರ ಮಾತುಗಳಲ್ಲಿ ನಾವು ಎಂದಿಗೂ ನಂಬಿಕೆಯನ್ನಿಡಬಾರದು. |
| लखनऊवाले बिना टोपी के कभी बाहर नहीं जाते। | ಲಖ್ನೋವಿನವರು ಟೋಪಿಯಿಲ್ಲದೆ ಹೊರಗೆ ಹೋಗುವುದೇ ಇಲ್ಲ. |
| हमें दूसरों की शिकायत करनेवालों से सदा होशियार रहना चाहिए। | ಇತರರನ್ನು ದೂಷಿಸುವವರೊಂದಿಗೆ ನಾವು ಯಾವಾಗಲೂ ಎಚ್ಚರಿಕೆಯಿಂದಿರಬೇಕು. |
| लक्ष्मण राम से छोटा था। | ಲಕ್ಷ್ಮಣನು ರಾಮನಿಗಿಂತ ಚಿಕ್ಕವನಾಗಿದ್ದನು. |
| महाराज दशरथ के पुत्रों में राम सबसे बड़े थे। | ದಶರಥರಾಜನ ಪುತ್ರರಲ್ಲಿ ರಾಮನು ಹಿರಿಯವನಾಗಿದ್ದನು. |
| शहर में रहने से गाँव में रहना बेहतर है। | ಪಟ್ಟಣದಲ್ಲಿ ವಾಸಮಾಡುವದಕ್ಕಿಂತ ಗ್ರಾಮದಲ್ಲಿ ವಾಸಮಾಡುವುದು ಉತ್ತಮ. |
| मोटर-गाड़ियाँ रेल-गाड़ियों से ज़्यादा तेज़ दौड़ सकती हैं। | ಮೋಟರ್ ಗಾಡಿಗಳು ರೈಲು ಗಾಡಿಗಳಿಗಿಂತ ಹೆಚ್ಚು ವೇಗವಾಗಿ ಓಡಬಲ್ಲವು. |
| हवाई जहाज़ घंटे में दो सौ मील से भी अधिक उड़ते हैं। | ವಾಯು ವಿಮಾನಗಳು ಘಂಟೆಗೆ ನೂರು ಮೈಲಿಗಳಿಗಿಂತಲೂ ಹೆಚ್ಚಾಗಿ ಹಾರಬಲ್ಲವು. |
| कलकत्ता की इमारतें बंबई की इमारतों से कम ऊँची हैं। | ಕಲ್ಕತ್ತೆಯ ಕಟ್ಟಡಗಳು ಬೊಂಬಾಯಿಯ ಕಟ್ಟಡಗಳಿಗಿಂತ ಎತ್ತರದಲ್ಲಿ ಕಡಿಮೆಯಾಗಿವೆ. |
| मेरे अच्छे से अच्छे दिन निकल गये। | ನನ್ನ ಅತ್ಯಂತ ಒಳ್ಳೆಯ ದಿನಗಳೆಲ್ಲಾ ಕಳೆದು ಹೋದವು. |

| | |
|---|---|
| मीठे से मीठे फल इस शहर में विकते हैं। | ಬಹಳ ಸಿಹಿಯಾದ ಹಣ್ಣುಗಳು ಈ ಪಟ್ಟಣದಲ್ಲಿ ಮಾರಲ್ಪಡುತ್ತವೆ. |
| मेरी समझ में ये फल सबसे बढ़कर खट्टे हैं। | ನನ್ನ ಅಭಿಪ್ರಾಯದಲ್ಲಿ ಈ ಹಣ್ಣುಗಳು ಎಲ್ಲಕ್ಕಿಂತಲೂ ಹೆಚ್ಚು ಹುಳಿಯಾಗಿವೆ. |
| मैं इस बात में उनको सबसे बढ़कर समझता हूँ। | ನಾನು ಅವರನ್ನು ಈ ವಿಷಯದಲ್ಲಿ ಎಲ್ಲರಿಗಿಂತಲೂ ಹೆಚ್ಚೆಂದು ಭಾವಿಸುತ್ತೇನೆ. |

## ಪಾಠ 25

## ಕರ್ಮಣಿಕ್ರಿಯೆ ಮತ್ತು ಪ್ರೇರಣಾರ್ಥಕ ಕ್ರಿಯೆ

ಕರ್ಮಣಿಪ್ರಯೋಗವು ಹಿಂದಿಯಲ್ಲಿ ಬಹು ವಿರಳವಾಗಿ ಉಪಯೋಗಿಸಲ್ಪಡುವುದು. ಸಾಧ್ಯವಾದ ಮಟ್ಟಿಗೆ ಇದನ್ನು ಬಿಟ್ಟುಬಿಡುವುದೇ ಒಳ್ಳೆಯದು. ಕರ್ಮಣಿಪ್ರಯೋಗಕ್ಕೆ ಕೆಳಗಿನ ನಿಯಮವನ್ನು ಅನುಸರಿಸಬೇಕು.

**69.** ಕರ್ತೃವಾಚ್ಯ ಕ್ರಿಯೆಯು ಸಾಮಾನ್ಯ ಭೂತಕಾಲದ ರೂಪಕ್ಕೆ "**जाना**" ಎನ್ನುವುದನ್ನು ಸೇರಿಸುವುದರಿಂದ ಕರ್ಮಣಿಕ್ರಿಯೆಯಾಗುತ್ತದೆ.

ಉದಾ:—**खाया जाना** ತಿನ್ನಲ್ಪಡುವುದು
**दिया जाना** ಕೊಡಲ್ಪಡುವುದು

**70.** ಕರ್ತರಿಪ್ರಯೋಗದ ಧಾತುವಿನ ರೂಪಗಳಂತೆಯೇ ಕರ್ಮಣಿಪ್ರಯೋಗದಲ್ಲೂ ಬದಲಾವಣೆಗಳು ಆಗುತ್ತವೆ. ಕರ್ತೃವಿನ ಲಿಂಗ, ವಚನಗಳಿಗನುಸಾರವಾಗಿ ಕರ್ಮಣಿಪ್ರಯೋಗದ ಕ್ರಿಯೆಯ ಎರಡು ಭಾಗಗಳೂ ರೂಪಾಂತರವನ್ನು ಹೊಂದುತ್ತವೆ. ಕರ್ತೃವಾಚ್ಯದ ಕರ್ತೃವಿಗೆ ಕರ್ಮವಾಚ್ಯದಲ್ಲಿ "**से**" ಸೇರಿಸಲ್ಪಡುತ್ತದೆ.

ಉದಾ:—**मुझसे फल खाये जाते हैं** ನನ್ನಿಂದ ಹಣ್ಣುಗಳು ತಿನ್ನಲ್ಪಡುತ್ತವೆ.

कृष्ण से रोटी खायी जाती है ಕೃಷ್ಣನಿಂದ ರೊಟ್ಟಿಯು ತಿನ್ನಲ್ಪಡುತ್ತವೆ.

71. ಹಿಂದೀ ಭಾಷೆಯ ಕರ್ಮಣಿಪ್ರಯೋಗದಲ್ಲಿ ಆ ಭಾಷಾ ಸಂಪ್ರದಾಯವನ್ನನುಸರಿಸಿದ ಒಂದು ಪ್ರಯೋಗವಿದೆ:—ಅದು "ಅಸಾಮರ್ಥ್ಯ" ವನ್ನು ಸೂಚಿಸುತ್ತದೆ. ಈ ಅರ್ಥದಲ್ಲಿ ಅಕರ್ಮಕ ಧಾತುಗಳು ಕೂಡ ಕರ್ಮಣಿ ಪ್ರಯೋಗದಲ್ಲಿ ಉಪಯೋಗಿಸಲ್ಪಡುತ್ತವೆ.

ಉದಾ:—मुझसे इतनी दूर चला नहीं जाएगा ನನ್ನಿಂದ ಇಷ್ಟುದೂರ ನಡೆಯಲಾಗುವುದಿಲ್ಲ.

इससे इतना भात नहीं खाया गया ಇವನಿಂದ ಇಷ್ಟು ಅನ್ನ ಊಟ ಮಾಡಲ್ಪಡಲಾಗಲಿಲ್ಲ.

ಸೂಚನೆ:—"जाया जाना" ಎಂಬುದು "जा" ಧಾತುವಿನ ಕರ್ಮಣಿ ರೂಪ.

72. ಕೆಳಗೆ ಕೊಟ್ಟಿರುವ ಅಕರ್ಮಕ ಧಾತುಗಳು ಕರ್ಮಣಿ ಪ್ರಯೋಗದ ಅರ್ಥದಲ್ಲಿ ಉಪಯೋಗಿಸಲ್ಪಡುತ್ತವೆ:—

**धुलना** ತೊಳೆಯಲ್ಪಡುವುದು　　**छूटना** ಬಿಡಲ್ಪಡುವುದು

**खुलना** ತೆರೆಯಲ್ಪಡುವುದು　　**फूटना** ಒಡೆಯಲ್ಪಡುವುದು

**खपना** ಮಾರಲ್ಪಡುವುದು　　**टूटना** ಮುರಿಯಲ್ಪಡುವುದು

**बजना** ಗಂಟೆ ಹೊಡಿಯಲ್ಪಡುವುದು

## ಪ್ರೇರಣಾರ್ಥಕ ರೂಪಗಳು

73. ಅಕರ್ಮಕಧಾತುವು ಅನೇಕ ವಿಧಗಳಲ್ಲಿ ಸಕರ್ಮಕ ಮತ್ತು ಪ್ರೇರಣಾರ್ಥಕ ರೂಪಗಳನ್ನು ಹೊಂದುತ್ತದೆ. ಅವುಗಳಿಗೆ ಸಂಬಂಧಿಸಿದ ಅನೇಕ ನಿಯಮಗಳನ್ನು ಇಲ್ಲಿ ಕೊಡದೆ ವಿದ್ಯಾರ್ಥಿಗಳು ರೂಪಾಂತರಗಳ

ರಚನೆಯನ್ನು ತಿಳಿಯಲು ಅನುಕೂಲಿಸುವಂತೆ ಅನೇಕ ಉದಾಹರಣೆಗಳನ್ನು ಕೊಡಲಾಗಿದೆ.

| ಅಕರ್ಮಕ | ಸಕರ್ಮಕ | ಪ್ರೇರಣಾರ್ಥಕ |
|---|---|---|
| उठ ಏಳು | उठा ಏಳಿಸು, ಎತ್ತು | उठवा |
| गिर ಬೀಳು | गिरा ಬೀಳಿಸು | गिरवा |
| डर ಹೆದರು | डरा ಹೆದರಿಸು | डरवा |
| दौड़ ಓಡು | दौड़ा ಓಡಿಸು | दौड़वा |
| जल ಉರಿಯು, ಸುಡು | जला ಉರಿಸು | जलवा |
| उड़ ಹಾರು | उड़ा ಹಾರಿಸು | उड़वा |
| लग ತಗಲು | लगा ತಗಲಿಸು | लगवा |
| लेट ಮಲಗು | लिटा ಮಲಗಿಸು | लिटवा |
| खेल ಆಡು | खिला ಆಡಿಸು | खिलवा |
| डूब ಮುಳುಗು | डुबा ಮುಳುಗಿಸು | डुबवा |
| जाग ಎಚ್ಚರವಾಗು | जगा ಎಚ್ಚರಿಸು | जगवा |
| जी ಬದುಕು | जिला ಬದುಕಿಸು | जिलवा |
| सो ನಿದ್ರಿಸು | सुला ಮಲಗಿಸು | सुलवा |
| रो ಅಳು | रुला ಅಳಿಸು | रुलवा |
| कट ಕಡಿದು ಹೋಗು | काट ಕಡಿದು ಹಾಕು | कटवा |
| मर ಸಾಯು | मार ಕೊಲ್ಲು, ಹೊಡೆ | मरवा |
| लद ಹೇರು | लाद ಹೇರಿಸು, ಹೊರಿಸು | लदवा |
| खुल ತೆರೆದುಹೋಗು | खोल ತೆರೆ | खुलवा |
| रुक ತಡೆದುಹೋಗು | रोक ತಡೆ | रुकवा |
| लुट ಕೊಳ್ಳೆಹೋಗು | लूट ಕೊಳ್ಳೆಹೊಡಿ | लुटवा |
| निकल ಹೊರಡು | निकाल ಹೊರಡಿಸು | निकलवा |
| बिगड़ ಕೆಡು | बिगाड़ ಕೆಡಿಸು | बिगड़वा |
| पहुँच ಸೇರು | पहुँचा ತಲಪಿಸು | पहुँचवा |

| ಅಕರ್ಮಕ | ಸಕರ್ಮಕ | ಪ್ರೇರಣಾರ್ಥಕ |
|---|---|---|
| लटक ತೂಗಾಡು | लटका ತೂಗಾಡಿಸು | लटकवा |
| छूट ಬಿಟ್ಟುಹೋಗು | छोड़ ಬಿಡು | छुड़वा |
| टूट ಒಡೆದುಹೋಗು | तोड़ ಮುರಿಯು | तुड़वा |
| फट ಹರಿದುಹೋಗು | फाड़ ಹರಿದುಹಾಕು | फड़वा |
| बिक ಮಾರಿಹೋಗು | बेच ಮಾರು | बिकवा |

ಸೂಚನೆ:—"जा, आ, पा ಮತ್ತು हो" ಇವುಗಳು ರೂಪಾಂತರವನ್ನು ಹೊಂದುವುದಿಲ್ಲ.

74. ಸಕರ್ಮಕ ಧಾತುಗಳು ಪ್ರೇರಣಾರ್ಥಕ ಮತ್ತು ಇಮ್ಮಡಿ ಪ್ರೇರಣಾರ್ಥಕ ರೂಪಗಳಿಗೆ ಈ ಕೆಳಗೆ ಕಂಡಂತೆ ಬದಲಾಗುತ್ತವೆ.

| ಸಕರ್ಮಕ | ಪ್ರೇರಣಾರ್ಥಕ | ಇಮ್ಮಡಿ ಪ್ರೇರಣಾರ್ಥಕ |
|---|---|---|
| बोल ಮಾತಾಡು | बुला ಮಾತಾಡಿಸು | बुलवा |
| खा ತಿನ್ನು | खिला ತಿನ್ನಿಸು | खिलवा |
| पी ಕುಡಿ | पिला ಕುಡಿಸು | पिलवा |
| दे ಕೊಡು | दिला ಕೊಡಿಸು | दिलवा |
| धो ಒಗೆ | धुला ಒಗೆಯಿಸು | धुलवा |
| कर ಮಾಡು | करा ಮಾಡಿಸು | करवा |
| पढ़ ಓದು | पढ़ा ಓದಿಸು | पढ़वा |
| सुन ಕೇಳು | सुना ಕೇಳಿಸು | सुनवा |
| लिख ಬರೆ | लिखा ಬರೆಯಿಸು | लिखवा |
| समझ ತಿಳಿ | समझा ತಿಳಿಯಿಸು | समझवा |
| देख ನೋಡು | दिखा ತೋರಿಸು | दिखवा |
| सीख ಕಲಿ | सिखा ಕಲಿಸು | सिखवा |

## ಪಾಠ 26

| | |
|---|---|
| चंद्रमा ಚಂದ್ರ | पौधा ಸಸ್ಯ |
| पूँछ (ಸ್ತ್ರೀ) ಬಾಲ | राय (ಸ್ತ್ರೀ) ಅಭಿಪ್ರಾಯ |
| क़िस्मत (ಸ್ತ್ರೀ) ದೂರ | कष्ट ಕಷ್ಟ, ತೊಂದರೆ, ನೋವು |
| दूर (ಸ್ತ್ರೀ) ದೂರ | संस्करण ಆವೃತ್ತಿ, ಸಂಸ್ಕರಣ |
| नाई ಕ್ಷೌರಕ, ನಾಯಿಂದ | उस्तरा ಕ್ಷೌರದ ಕತ್ತಿ |
| सेना (ಸ್ತ್ರೀ) ಸೈನ್ಯ | फ़क़ीर ಭಿಕ್ಷುಕ |
| कुर्ता ಸಣ್ಣ ತೋಳಿನ ಜುಬ್ಬ | कमीज़ ಷರಟು |
| माल ಸಾಮಾನು | सामान ಸಾಮಾನು, ಮೂಟೆ |
| वीमार ಕಾಯಿಲೆ, ರೋಗಿ | अमीर ಧನಿಕ |
| तमाम, सारा ಎಲ್ಲಾ, ಸಂಪೂರ್ಣ | मुफ़्त ಉಚಿತವಾಗಿ |
| ज़वरदस्त ಬಲವಂತ, ಪ್ರಬಲ | कि ಏನೆಂದರೆ |

ज़वरदस्ती ಬಲಾತ್ಕಾರವಾಗಿ

| | |
|---|---|
| कहा जाता कि चन्द्रमा पर पेड़-पौधे नहीं हैं। | ಚಂದ್ರನ ಮೇಲೆ ಮರಗಿಡಗಳು ಇಲ್ಲವಂತೆ. |
| कई वार आसमान पर पूँछवाले तारे देखे गये हैं। | ಅನೇಕಸಾರಿ ಆಕಾಶದಲ್ಲಿ ಬಾಲಚುಕ್ಕಿಗಳು ನೋಡಲ್ಪಟ್ಟಿವೆ. |
| उनको सव वातें लिखी गयी हैं, पर उनसे अभी तक कोई जवाव नहीं आया है। | ಎಲ್ಲಾ ವಿಷಯುಗಳು ಅವರಿಗೆ ಬರೆಯಲ್ಪಟ್ಟಿವೆ, ಆದರೆ ಅವರಿಂದ ಇದುವರೆಗೂ ಉತ್ತರವೇ ಇಲ್ಲ. |
| मेरी राय है कि उनको ये वातें इतनी जल्दी न वतायी जाएँ। | ಈ ವಿಚಾರಗಳನ್ನು ಅವರಿಗೆ ಇಷ್ಟು ಬೇಗ ಹೇಳಬಾರದೆಂಬುದೇ ನನ್ನ ಅಭಿಪ್ರಾಯವಾಗಿದೆ. |
| क्या किया जाए, मेरी क़िस्मत ही वुरी है। | ಏನು ಮಾಡುವುದು, ನನ್ನ ಅದೃಷ್ಟವೇ ಕೆಟ್ಟದು. |

| | |
|---|---|
| यह आदमी बड़ा कमज़ोर है, इससे चला नहीं जाता। | ಈ ಮನುಷ್ಯನು ಬಹಳ ಅಶಕ್ತನು, ಇವನಿಂದ ನಡೆಯಲಾಗುವುದಿಲ್ಲ. |
| मुझसे तुम्हारे कष्ट सहे नहीं जाते। | ನನ್ನಿಂದ ನಿಮ್ಮ ಕಷ್ಟಗಳನ್ನು ಸಹಿಸಲಾಗುವುದಿಲ್ಲ. |
| इस बीमार आदमी से इतनी दूर न जाया जाएगा। | ಈ ಕಾಯಿಲೆ ಮನುಷ್ಯನಿಂದ ಇಷ್ಟು ದೂರ ನಡೆಯಲಾಗುವುದಿಲ್ಲ. |
| इस संस्करण की तमाम पुस्तकें बहुत जल्दी खप जाएँगी। | ಈ ಆವೃತ್ತಿಯ ಎಲ್ಲಾ ಪುಸ್ತಕಗಳೂ ಬಹಳ ಬೇಗನೆ ಖರ್ಚಾಗಿಬಿಡುವುವು. |
| रास्ते में मेरी छड़ी टूट गयी। | ದಾರಿಯಲ್ಲಿ ನನ್ನ ಬೆತ್ತವು ಮುರಿದು ಹೋಯಿತು. |
| मेरे पास उस्तरा नहीं है, इसलिए मैं नाई से बाल बनवाता हूँ। | ನನ್ನ ಹತ್ತಿರ ಕ್ಷೌರದ ಕತ್ತಿಯಿಲ್ಲವಾದ್ದರಿಂದ ನಾನು ನಾಯಿಂದನಿಂದ ಕ್ಷೌರ ಮಾಡಿಸಿಕೊಳ್ಳುತ್ತೇನೆ. |
| अमीर लोग अपने हाथ से कुछ नहीं करते, सब काम नौकरों से करवाते हैं। | ಧನವಂತರು ಯಾವ ಕೆಲಸವನ್ನೂ ತಮ್ಮ ಕೈಯಿಂದ ಮಾಡುವುದಿಲ್ಲ, ಎಲ್ಲಾ ಕೆಲಸವನ್ನೂ ನೌಕರರಿಂದ ಮಾಡಿಸಿಕೊಳ್ಳುತ್ತಾರೆ. |
| ज़बरदस्त दुश्मन को देखकर राजा ने अपनी सेना हटा ली। | ಬಲಶಾಲಿಗಳಾದ ಶತ್ರುಗಳನ್ನು ನೋಡಿ ರಾಜನು ತನ್ನ ಸೇನೆಯನ್ನು ಹಿಂತೆಗೆದನು. |
| रोम के बादशाह नीरो ने बहुत लोगों के घर जलवा दिये थे। | ರೋಮ್ ದೇಶದ ಚಕ್ರವರ್ತಿ ನೀರೋವು ಅನೇಕ ಜನರ ಮನೆಗಳನ್ನು ಸುಡಿಸಿಬಿಟ್ಟದ್ದನು. |
| बहुत लोगों को मोटर चलाना नहीं आता। | ಅನೇಕ ಜನರಿಗೆ ಮೋಟಾರ್ ನಡೆಯಿಸುವುದು ಬರುವುದಿಲ್ಲ. |

| | |
|---|---|
| जो बात तुम खुद नहीं समझते हो वह दूसरों को कैसे समझा सकते हो? | ನೀವೇ ತಿಳಿದುಕೊಳ್ಳದೆ ಇರುವ ವಿಷಯುಗಳನ್ನು ಇತರರಿಗೆ ಹೇಗೆ ತಿಳಿಸಬಲ್ಲಿರಿ? |
| मैंने उस दर्जी से चार कुर्ते और दो कमीज़ सिलवाये। | ನಾನು ಆ ದರ್ಜಿಯುವನಿಂದ ನಾಲ್ಕು ಜುಬ್ಬಗಳನ್ನೂ ಎರಡು ಷರಟುಗಳನ್ನೂ ಹೊಲಿಸಿದೆನು. |
| उन्होंने मेरे सारे माल जहाज़ में मुफ़्त लदवा दिये। | ಅವರು ನನ್ನ ಸಾಮಾನುಗಳನ್ನೆಲ್ಲ ಹಡಗಿನಲ್ಲಿ ಉಚಿತವಾಗಿ ಹೇರಿಸಿದರು. |
| कहा जाता है कि औरंगज़ेब ने जसवन्तसिंह को मरवा डाला था। | ಔರಂಗಜೇಬನು ಜಸವಂತಸಿಂಹನನ್ನು ಕೊಲ್ಲಿಸಿದ್ದನಂತೆ. |
| उन्होंने उस फ़क़ीर को घर से वाहर निकलवा दिया। | ಅವನು ಆ ಭಿಕ್ಷುಕನನ್ನು ಮನೆಯಿಂದ ಹೊರಗೆ ಅಟ್ಟಿಸಿಬಿಟ್ಟನು. |
| मैं खुद नहीं लिख सकता था, इसलिए यह चिट्ठी उनसे लिखवा ली थी। | ನಾನು ಸ್ವತಃ ಬರೆಯಲಾರದವನಾಗಿದ್ದೆನು, ಆದುದರಿಂದ ಈ ಕಾಗದವನ್ನು ಅವನಿಂದ ಬರೆಯಿಸಿದ್ದೆ. |
| आजकल मुझे कोई हिन्दी नहीं सिखाता, मैं खुद सीखता हूँ। | ನನಗೆ ಇತ್ತೀಚೆಗೆ ಯಾರೂ ಹಿಂದೀ ಹೇಳಿ ಕೊಡುವುದಿಲ್ಲ; ನಾನು ಸ್ವತಃ ಕಲಿಯುತ್ತೇನೆ. |
| जो काम करो सो ठीक से करो। | ಮಾಡುವ ಕೆಲಸವನ್ನು ಸರಿಯಾಗಿ ಮಾಡಿ. |
| तुम जो कहो सो करूँगा। | ನೀವು ಹೇಳುವುದನ್ನು ಮಾಡುವೆನು. |

## ಪಾಠ 27

## ಕ್ರಿಯಾಸಮಾಸ

ಇತರ ಭಾಷಾ ಭಾಗಗಳಿಂದ (ಶಬ್ದಗಳಿಂದ) ಏರ್ಪಡುವ ಕ್ರಿಯೆಗಳು

75. ನಾಮಪದ, ಗುಣವಾಚಕ ಮತ್ತು ಕ್ರಿಯಾವಿಶೇಷಣಗಳಿಗೆ **करना** ಅಥವಾ **होना** ಎಂಬುದನ್ನು ಸೇರಿಸುವುದರಿಂದ ಕ್ರಿಯಾಸಮಾಸಗಳಾಗುವುವು.

**होना** ಎನ್ನುವುದು ಅಕರ್ಮಕವನ್ನೂ **करना** ಎನ್ನುವುದು ಸಕರ್ಮಕವನ್ನೂ ಸೂಚಿಸುತ್ತದೆ. ಇಂತಹ ಅನೇಕ ಕ್ರಿಯಾಪದಗಳನ್ನು ಹಿಂದಿನ ಪಾಠಗಳಲ್ಲೇ ಕೊಟ್ಟಿದೆ. ಆದಾಗ್ಯೂ ಇನ್ನೂ ಕೆಲವನ್ನು ಕೆಳಗೆ ಕೊಡಲಾಗಿದೆ.

(ಅ) ನಾಮಪದಗಳಿಗೆ **होना** ಅಥವಾ **करना** ಎನ್ನುವುದನ್ನು ಸೇರಿಸುವುದು:—**शुरू** ಪ್ರಾರಂಭ, **शुरू होना** ಪ್ರಾರಂಭವಾಗುವುದು (ಅಕರ್ಮಕ), **शुरू करना** ಪ್ರಾರಂಭಮಾಡುವುದು (ಸಕರ್ಮಕ); **याद** ಜ್ಞಾಪಕ, **याद होना** ಜ್ಞಾಪಕವಾಗುವುದು, **याद करना** ಜ್ಞಾಪಕ ಮಾಡುವುದು; **तैयार** ಸಿದ್ಧ, **तैयार होना** ಸಿದ್ಧವಾಗುವುದು, **तैयार करना** ಸಿದ್ಧಿಪಡಿಸುವುದು; **पूजा** ಪೂಜೆ, **पूजा करना** ಪೂಜಿಸುವುದು.

(ಆ) ಗುಣವಾಚಕಗಳಿಂದ:—**मीठा** ಸಿಹಿ, **मीठा होना** ಸಿಹಿಯಾಗುವುದು, **मीठा करना** ಸಿಹಿಮಾಡುವುದು; **छोटा** ಚಿಕ್ಕ, **छोटा होना** ಚಿಕ್ಕದಾಗುವುದು, **छोटा करना** ಚಿಕ್ಕದು ಮಾಡುವುದು; **चिकना** ನುಣ್ಣಗೆ, **चिकना होना** ನುಣ್ಣಗಾಗುವುದು, **चिकना करना** ನುಣ್ಣಗೆ ಮಾಡುವುದು; **ख़राब** ಕೆಟ್ಟ, **ख़राब होना** ಕೆಡುವುದು, **ख़राब करना** ಕೆಡಿಸುವುದು; **अच्छा** ಒಳ್ಳೆಯ, **अच्छा होना** ಒಳ್ಳೆಯದಾಗುವುದು, **अच्छा करना** ಒಳ್ಳೆಯದು ಮಾಡುವುದು; **खड़ा** ನಿಂತಿರುವ, **खड़ा होना** ನಿಲ್ಲುವುದು, **खड़ा करना** ನಿಲ್ಲಿಸುವುದು.

(ಇ) ಕ್ರಿಯಾವಿಶೇಷಣಗಳಿಂದ:—**नीचा** ಕೆಳಗೆ, **नीचा होना** ಕೆಳಗಾಗುವುದು, **नीचा करना** ಕೆಳಗೆ ಮಾಡುವುದು; **ऊँचा** ಎತ್ತರ, **ऊँचा होना** ಎತ್ತರವಾಗುವುದು, **ऊँचा करना** ಎತ್ತರಿಸುವುದು; **ऊपर** ಮೇಲೆ, **ऊपर होना** ಮೇಲಾಗುವುದು, **ऊपर करना** ಮೇಲೆ ಎತ್ತುವುದು; **आगे** ಮುಂದೆ, **आगे होना** ಮುಂದಾಗುವುದು, **आगे करना** ಮುಂದಾಗುವಂತೆ ಮಾಡುವುದು; **पीछा करना** ಹಿಂಬಾಲಿಸುವುದು, ಬೆನ್ನಟ್ಟುವುದು.

76. ಬೇರೆಬೇರೆ ನಾಮಪದಗಳಿಗೆ **देना, खाना, उड़ाना, लड़ाना, मचाना, उठाना, झेलना** ಇತ್ಯಾದಿಗಳನ್ನು ಸೇರಿಸುವುದರಿಂದ ಕ್ರಿಯಾಪದಗಳು ಆಗುತ್ತವೆ. ಇವು ಭಾಷಾ ಸಂಪ್ರದಾಯಕ್ಕೆ ಅಧೀನ ರೂಪಗಳಾದುದರಿಂದ ಇವುಗಳನ್ನು ಮನಸ್ಸು ಬಂದಂತೆ ಮಾಡಲಾಗುವುದಿಲ್ಲ.

| | |
|---|---|
| **जवाब** ಉತ್ತರ | **जवाब देना** ಉತ್ತರ ಕೊಡುವುದು |
| **धोखा** ಮೋಸ | **धोखा देना** ಮೋಸಮಾಡುವುದು |
| **सज़ा** (ಸ್ತ್ರೀ) ಶಿಕ್ಷೆ | **सज़ा देना** ಶಿಕ್ಷೆಕೊಡುವುದು |
| **क़सम** (ಸ್ತ್ರೀ) ಪ್ರಮಾಣ | **क़सम खाना** ಪ್ರಮಾಣಮಾಡುವುದು |
| **हवा** ವಾಯು, ಹವೆ | **हवा खाना** ವಾಯು ಸೇವಿಸುವುದು |
| **मज़ा** ಸ್ವಾರಸ್ಯ, ಸುಖಾನುಭವ | **मज़ा उड़ाना** ಸುಖ ಅನುಭವಿಸುವುದು |
| **माल** ಸಾಮಾನು, ವಸ್ತು | **माल उड़ाना** ಕೊಳ್ಳೆಹೊಡಿ, ರುಚಿಕರವಾದ ತಿಂಡಿಗಳನ್ನು ತಿನ್ನುವುದು |
| **दिमाग़** ಮೆದುಳು, ಬುದ್ಧಿ | **दिमाग़ लड़ाना** ಬುದ್ಧಿಯನ್ನು ಉಪಯೋಗಿಸುವುದು |
| **गप** ಪೊಳ್ಳುಹರಟೆ | **गप लड़ाना** ಹರಟೆ ಹೊಡಿಯುವುದು |
| **झगड़ा** ಜಗಳ | **झगड़ा मचाना** ಜಗಳ ಕಾಯುವುದು |
| **गुस्सा** ಕೋಪ | **गुस्से में आना** ಕೋಪಿಸುವುದು |

ख़बर (ಸ್ತ್ರೀ) ಸಮಾಚಾರ
धक्का ನೂಕಲು
मार (ಸ್ತ್ರೀ) ಹೊಡೆತ, ಏಟು
ग़म ವ್ಯಸನ
रुपये ಹಣ

ख़बर देना ಸಮಾಚಾರ ತಿಳಿಸುವುದು
धक्का देना ನೂಕುವುದು
मार खाना ಏಟು ತಿನ್ನುವುದು
ग़म खाना ವ್ಯಸನಪಡುವುದು
रुपये उड़ाना ದುಂದುಗಾರಿಕೆ ಮಾಡುವುದು

अक़्ल (ಸ್ತ್ರೀ) ಬುದ್ಧಿ
अक़्ल लड़ाना ಬುದ್ಧಿಯನ್ನು ಉಪಯೋಗಿಸುವುದು

शोर ಧ್ವನಿ, ಗುಲ್ಲು
अचंभा ಆಶ್ಚರ್ಯ
तकलीफ़ ಕಷ್ಟ
मुसीवत ಆಪತ್ತು

शोर मचाना ಗುಲ್ಲುಮಾಡುವುದು
अचंभे में आना ಆಶ್ಚರ್ಯಪಡುವುದು
तकलीफ़ उठाना ಕಷ್ಟಸಹಿಸುವುದು
मुसीवत झेलना ಆಪತ್ತು ಅನುಭವಿಸುವುದು

होश ಸ್ಮೃತಿ
तलाक़ ದಾಂಪತ್ಯವಿಚ್ಛೇದನ
कष्ट ದುಃಖ, ನೋವು

होश उड़ना ಪ್ರಜ್ಞೆತಪ್ಪುವುದು
तलाक़ देना ದಾಂಪತ್ಯವಿಚ್ಛೇದಿಸುವುದು
कष्ट सहना ಕಷ್ಟ, ಅಥವಾ ನೋವು ಅನುಭವಿಸುವುದು

दुख, कष्ट ತೊಂದರೆ
दुख या कष्ट उठाना ತೊಂದರೆಪಡು, ಕಷ್ಟವನ್ನನುಭವಿಸು

जी ಮನಸ್ಸು
गड़बड़ ಗಡಿಬಿಡಿ, ಗೊಂದಲ
वाल ಕೂದಲು
जलपान, नाश्ता ಉಪಾಹಾರ
झंडा ಬಾವುಟ
मौजूद ಹಾಜರು, ಉಪಸ್ಥಿತಿ

जान (ಸ್ತ್ರೀ) ಜೀವ, ಪ್ರಾಣ
गाना ಸಂಗೀತ
ज़िन्दगी ಜೀವಮಾನ
शेर ಸಿಂಹ
डाकू ದರೋಡೆಗಾರ
नाराज़ ಕೋಪ

**घवड़ाना** ಹೆದರುವುದು, ಗಾಬರಿ ಗೊಳ್ಳುವುದು

**क़बूल करना** ಒಪ್ಪಿಕೊಳ್ಳುವುದು

**डाँटना** ಹೆದರಿಸುವುದು, ಬೈಯ್ಯುವುದು

**भोजन, खाना** ಊಟ

**कमाना** ಸಂಪಾದಿಸುವುದು

**पार पाना** ಪಾರಾಗುವುದು

**वेकार** ಅನಾವಶ್ಯಕವಾಗಿ, ಸುಮ್ಮನೆ

| | |
|---|---|
| वह जी-जान से मुझे प्यार करता है। | ಅವನು ನನ್ನನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಾನೆ. |
| उनका गाना शुरू होते समय मैं वहाँ मौजूद नहीं था। | ಅವರ ಗಾಯನ ಆರಂಭವಾದಾಗ ನಾನು ಅಲ್ಲಿ ಹಾಜರಿರಲಿಲ್ಲ. |
| तुमने सव गड़वड़ कर दी। | ನೀವು ಎಲ್ಲಾ ಗಡಿಬಿಡಿ ಮಾಡಿಬಿಟ್ಟಿರಿ. |
| उसने मेरा सव काम ख़राव कर दिया, यह सुनकर मैं घवड़ा गया। | ಅವನು ನನ್ನ ಎಲ್ಲಾ ಕೆಲಸಗಳನ್ನೂ ಕೆಡಿಸಿದನೆಂದು ಕೇಳಿ ನಾನು ಗಾಬರಿ ಗೊಂಡೆನು. |
| वेकार क्यों इतने नाराज़ होते हो? | ಅನಾವಶ್ಯಕವಾಗಿ ಏಕೆ ಅಷ್ಟು ಕೋಪಿಸಿ ಕೊಳ್ಳುತ್ತೀರಿ? |
| उसने अपनी ज़िन्दगी में कभी किसीकी मदद नहीं की। | ಅವನು ತನ್ನ ಜೀವಮಾನದಲ್ಲಿ ಎಂದೂ ಯಾರಿಗೂ ಸಹಾಯಮಾಡಲಿಲ್ಲ. |
| शेर को देखते ही मेरे होश उड़ गये। | ಸಿಂಹವನ್ನು ನೋಡಿದೊಡನೆಯೇ ನನ್ನ ಪ್ರಜ್ಞೆ ಹಾರಿಹೋಯಿತು. |
| नाई ने मेरे वाल वहुत छोटे कर दिये। | ಕ್ಷೌರಕನು ನನ್ನ ಕೂದಲನ್ನು ಬಹಳ ಚಿಕ್ಕದಾಗಿ ಕತ್ತರಿಸಿದನು. |
| अध्यापक ने विद्यार्थी को वेंच पर खड़ा कर दिया। | ಉಪಾಧ್ಯಾಯರು ವಿದ್ಯಾರ್ಥಿಯನ್ನು ಬೆಂಚಿನಮೇಲೆ ನಿಲ್ಲಿಸಿದರು. |
| झंडे को और थोड़ा ऊँचा कर दो। | ಬಾವುಟವನ್ನು ಇನ್ನೂ ಸ್ವಲ್ಪ ಮೇಲಕ್ಕೆ ಎತ್ತಿಬಿಡು. |

मैं क़सम खाकर कहता हूँ कि मुझे इस बात का बिलकुल पता नहीं था।

ನಾನು ಈ ವಿಚಾರವನ್ನು ಸರ್ವಥಾ ತಿಳಿದಿರಲಿಲ್ಲ ಎಂದು ಪ್ರಮಾಣಪೂರ್ವಕವಾಗಿ ಹೇಳುತ್ತೇನೆ.

मार खाने पर भी उसने अपना क़सूर क़बूल नहीं किया।

ಏಟು ತಿಂದಮೇಲೂ ಅವನು ತನ್ನ ತಪ್ಪುಗಳನ್ನು ಒಪ್ಪಿಕೊಳ್ಳಲಿಲ್ಲ.

बहुत देर तक दिमाग़ लड़ाने पर भी यह बात उसकी समझ में नहीं आयी।

ಅವನು ಬಹಳ ಹೊತ್ತಿನವರೆಗೆ ಬುದ್ಧಿಯನ್ನು ಉಪಯೋಗಿಸಿದರೂ ಈ ವಿಷಯವು ಅವನಿಗೆ ತಿಳಿಯದೆ ಹೋಯಿತು.

तुमने तो व्यर्थ का झगड़ा खड़ा कर दिया।

ನೀವು ವ್ಯರ್ಥವಾದ ಜಗಳವನ್ನು ಹೂಡಿದ್ದೀರಿ.

जज ने डाकुओं को कड़ी सज़ा दी।

ನ್ಯಾಯಾಧೀಶನು ದರೋಡೆಗಾರರಿಗೆ ಕಠಿಣ ಶಿಕ್ಷೆಯನ್ನು ವಿಧಿಸಿದನು.

इस क्लास के लड़के बहुत शोर मचाते हैं।

ಈ ತರಗತಿಯ ವಿದ್ಯಾರ್ಥಿಗಳು ಬಹಳ ಗುಲ್ಲುಮಾಡುತ್ತಾರೆ.

तुम तो इतने ख़राब निकले कि तुमसे पार पाना मुश्किल है।

ನಿಮ್ಮ ಸಂಗಡ ನಡೆದುಕೊಳ್ಳುವುದು ಬಹಳ ಕಷ್ಟವಾಗುವಷ್ಟು (ನೀವು) ಕೆಟ್ಟವರಾಗಿಬಿಟ್ಟಿರಿ.

तुमको क्या है, तुम बैठे-बैठे मज़ा उड़ाओ।

ನಿಮಗೇನಾಗಬೇಕು, ನೀವು ಕೂತು ಕೂತು ಸುಖ ಅನುಭವಿಸಿರಿ.

मालिक ने नौकर को बहुत डाँटा, लेकिन नौकर ग़म खा गया।

ಯಜಮಾನನು ನೌಕರನನ್ನು ಬಹಳ ಬೈದನು, ಆದರೆ ನೌಕರನು ಸಹಿಸಿಕೊಂಡನು.

चलो, आज समुद्र पर हवा खाने चलें।

ನಡೆಯಿರಿ, ಸಮುದ್ರದಬಳಿಗೆ ವಾಯುಸೇವನೆಗೆ ಹೋಗೋಣ.

मैं आपका भोजन तैयार कर दूँ?

ನಾನು ನಿಮಗೆ ಊಟಕ್ಕೆ ಸಿದ್ಧಮಾಡಲೆ?

| | |
|---|---|
| रामचन्द्र, घर जाओ, नाश्ता तैयार है। | ರಾಮಚಂದ್ರಾ, ಮನೆಗೆ ಹೋಗಿ, ಫಲಾಹಾರ ಸಿದ್ಧವಾಗಿದೆ. |
| उन्होंने वहुत कष्ट झेलकर रुपये कमाये हैं। | ಅವರು ಬಹಳ ಕಷ್ಟಪಟ್ಟು ಹಣ ಸಂಪಾದಿಸಿದ್ದಾರೆ. |
| वह दो घंटे से यहाँ खड़ा है। | ಅವನು ಎರಡು ಘಂಟೆಯಿಂದ ಇಲ್ಲಿ ನಿಂತಿದ್ದಾನೆ. |
| गाड़ी की आवाज़ सुनकर सव मुसाफ़िर खड़े हो गये। | ಗಾಡಿಯ ಶಬ್ದವನ್ನು ಕೇಳಿ ಎಲ್ಲಾ ಯಾತ್ರಿಕರು ನಿಂತುಬಿಟ್ಟರು. |
| जव वह गाड़ी खड़ी करता है तव उसमें वैठो। | ಅವನು ಗಾಡಿ ನಿಲ್ಲಿಸಿದಾಗ ಅದರಲ್ಲಿ ಕುಳಿತುಕೊಳ್ಳಿರಿ. |
| खड़े रहो, मैं भी तुम्हारे साथ चलता हूँ। | ನಿಲ್ಲಿರಿ, ನಾನೂ ನಿಮ್ಮ ಸಂಗಡ ಬರುತ್ತೇನೆ. |
| मैं खड़ा होता हूँ, तुम जल्दी आओ। | ನಾನು (ಕಾದು) ನಿಲ್ಲುತ್ತೇನೆ, ನೀವು ಬೇಗನೆ ಬನ್ನಿರಿ. |

---

## ಪಾಠ 28

### ವಿಭಕ್ತಿ ಪ್ರತ್ಯಯಗಳ ಪ್ರಯೋಗಾಧೀನ ರೂಪಗಳು

ವಿಭಕ್ತಿ ಪ್ರತ್ಯಯಗಳ ಸಾಮಾನ್ಯ ಪ್ರಯೋಗಗಳಲ್ಲದೆ, ಕೆಲವು ವಿಶೇಷ ಪ್ರಯೋಗಗಳೂ ಉಂಟು. ಅವುಗಳಲ್ಲಿ ಕೆಲವನ್ನು ಕೊಟ್ಟಿದೆ.

77. ಕೆಳಗೆ ಕೊಟ್ಟಿರುವ ಧಾತುಗಳ ಹಿಂದೆ **से** ಎನ್ನುವುದು ಬರುತ್ತದೆ. **कहना** ಹೇಳುವುದು, **पूछना** ಕೇಳುವುದು, **वोलना** ಮಾತನಾಡುವುದು, **माँगना** ಭಿಕ್ಷೆ ಬೇಡುವುದು, **डरना** ಹೆದರುವುದು, **प्रार्थना करना** ಪ್ರಾರ್ಥಿಸುವುದು, **वात करना** ಮಾತನಾಡುವುದು, **पाला पड़ना** ಮತ್ತೊಬ್ಬನ ಅಧೀನದಲ್ಲಿರುವುದು, **मिलना** ಅಥವಾ **मुलाक़ात करना**

ಭೇಟಿಯಾಗುವುದು, **वादा करना** ವಾಗ್ದಾನಮಾಡುವುದು, **इनकार करना** ಅಸ್ವೀಕಾರ ಮಾಡುವುದು, **मुहब्बत करना** ಪ್ರೀತಿಸುವುದು, **तंग आना** ಬೇಸರಗೊಳ್ಳುವುದು, **शादी करना** ಮದುವೆಯಾಗುವುದು.

ಉದಾ :—**उससे कहो, राम से पूछो, ईश्वर से प्रार्थना करो, राम से मिलो, देने से इनकार मत करो, रामराव की लड़की से शादी करो।**

ಸೂಚನೆ :—(1) '**मिलना**' ಎಂಬುದರ ಹಿಂದೆ **से** ಎಂಬ ವಿಭಕ್ತಿ ಪ್ರತ್ಯಯವನ್ನು ಪ್ರಯೋಗಿಸಿದಾಗ "ಬೇಕೆಂತಲೆ ಹೋಗಿ ನೋಡಿದೆನು" "ಮನಃ ಪೂರ್ವಕವಾಗಿ ಭೇಟಿಯಾದೆನು" ಎಂಬ ಅರ್ಥವನ್ನು ಸೂಚಿಸುವುದು. ಹಿಂದೆ **को** ಎಂಬ ವಿಭಕ್ತಿ ಪ್ರತ್ಯಯವನ್ನು ಪ್ರಯೋಗಿಸಿದಾಗ 'ಅಕಸ್ಮಾತ್ತಾಗಿ ನೋಡಿದೆನು.' ಎಂಬ ಅರ್ಥವನ್ನು ಸೂಚಿಸುವುದು.

ಉದಾ :—**मैं अध्यापक से मिला** ನಾನು ಉಪಾಧ್ಯಾಯರನ್ನು (ಅವರಿದ್ದೆಡೆಗೆ ಹೋಗಿ) ನೋಡಿದೆನು.

**मैं अध्यापक को मिला** ನಾನು ಉಪಾಧ್ಯಾಯರನ್ನು ಅಕಸ್ಮಾತ್ತಾಗಿ ಕಂಡೆನು.

(2) ಕೆಲವುವೇಳೆ '**से**' ಎಂಬುದನ್ನು ಬಿಟ್ಟುಬಿಡುವುದೂ ಉಂಟು.

ಉದಾ :—**आँखों देखना, कानों सुनना, भूखों मरना** ಇವುಗಳನ್ನು **आँखों से देखना** ಎಂದು ಮೊದಲಾಗಿ ಹೇಳಬೇಕಾದುದಿಲ್ಲ.

78. ಸಂಬಂಧಕಾರಕ (ಷಷ್ಠೀವಿಭಕ್ತಿ ಪ್ರಯೋಗ).

(1) ನಾಮಪದಗಳಿಂದ ಉತ್ಪನ್ನವಾದ ಕ್ರಿಯಾಪದಗಳಲ್ಲಿ ನಾಮಪದವು ಪ್ರಧಾನವೆಂದು ಗಣಿಸಲ್ಪಟ್ಟು, ಅದರ ಲಿಂಗಭೇದವನ್ನನುಸರಿಸಿ ಚತುರ್ಥೀ ವಿಭಕ್ತಿಗೆ ಬದಲು ಷಷ್ಠೀವಿಭಕ್ತಿ ಬರುವುದು.

ಇಂತಹ ಕೆಲವು ಕ್ರಿಯಾಪದಗಳು:—**याद करना** ನೆನಪುಮಾಡುವುದು, **भरोसा रखना** ಭರವಸೆ ಇಡುವುದು, **यक़ीन करना** ನಂಬುವುದು, **तारीफ़ करना** ಹೊಗಳುವುದು. **शिकायत करना** ದೂರು ಹೇಳುವುದು, **गले लगना** ಆಲಿಂಗಿಸುವುದು, **इज़्ज़त करना** ಗೌರವಿಸುವುದು, **इंतज़ार करना** ನಿರೀಕ್ಷಿಸುವುದು, **परवाह करना** ಲಕ್ಷ್ಯಕ್ಕೆ ತರುವುದು, **हँसी उड़ाना** ಗೇಲಿ ಎಬ್ಬಿಸುವುದು, ಪರಿಹಾಸ್ಯಮಾಡುವುದು, **अपराध करना** ಕೆಟ್ಟದ್ದನ್ನು ಮಾಡುವುದು.

ಉದಾ:—**वह मेरी मदद करता है** ಅವನು ನನಗೆ ಸಹಾಯ ಮಾಡುತ್ತಾನೆ.

**हम उनकी इज़्ज़त करते हैं** ನಾವು ಅವರಿಗೆ ಗೌರವ ಕೊಡುತ್ತೇವೆ.

**मैं आपका इंतज़ार करता था** ನಾನು ನಿಮ್ಮನ್ನು ನಿರೀಕ್ಷಿಸುತ್ತಿದ್ದೆ.

**इस बात की परवाह नहीं करता** ನಾನು ಈ ಮಾತನ್ನು ಲಕ್ಷ್ಯಕ್ಕೆ ತರುವುದಿಲ್ಲ.

**तुम उनकी हँसी मत उड़ाओ** ನೀವು ಅವರನ್ನು ಗೇಲಿ ಮಾಡಬೇಡಿ.

(2) ವಸ್ತುಗಳ ಬೆಲೆಯನ್ನು ಸೂಚಿಸುವಾಗ ಷಷ್ಠೀವಿಭಕ್ತಿಯು (ಸಂಬಂಧಕಾರಕ) ಬರುತ್ತದೆ.

ಉದಾ:—**दो रुपये की पुस्तक** ಎರಡು ರೂಪಾಯಿ ಬೆಲೆಯ ಪುಸ್ತಕ.

**सौ रुपये का घोड़ा** ನೂರು ರೂಪಾಯಿ ಬೆಲೆಬಾಳುವ ಕುದುರೆ.

(3) ಯಾವುದರಿಂದ ಮತ್ತು ಯಾರಿಂದ ಮಾಡಲ್ಪಟ್ಟ ವಸ್ತುಗಳು ಎಂಬುದನ್ನು ಸೂಚಿಸುವಾಗ—

ಉದಾ :—पत्थर का मकान ಕಲ್ಲಿನ ಕಟ್ಟಡ.

सोने का प्याला ಬಂಗಾರದ ಬಟ್ಟಲು.

तुलसीदास की रामायण ತುಲಸೀದಾಸರ ರಾಮಾಯಣ.

(4) ವಾಸಸ್ಥಲವನ್ನು ಹೇಳುವಾಗ:

ಉದಾ :—कलकत्ता का व्यापारी ಕಲಕತ್ತೆಯ ವ್ಯಾಪಾರಿ.

गाँव का आदमी ಹಳ್ಳಿಯ ಮನುಷ್ಯ.

(5) ಕಾಲ ಅಥವಾ ವಯಸ್ಸಿನ ನಿರೂಪಣಕ್ಕೆ:

ಉದಾ :—दो बरस का बालक ಎರಡು ವರ್ಷದ ಮಗು.

दस बरस की लड़की ಹತ್ತು ವರ್ಷದ ಹುಡುಗಿ.

(6) ಸಂಬಂಧಿಗಳು, ದೇಹದ ಅಂಗಗಳು ಮತ್ತು ಸ್ಥಿರಸ್ವತ್ತನ್ನು ಸೂಚಿಸುವಾಗ के ಪ್ರತ್ಯಯವನ್ನು ಪ್ರಯೋಗಿಸಲಾಗುವುದು.

ಉದಾ :—उसके दो भाई हैं ಅವನಿಗೆ ಇಬ್ಬರು ಸಹೋದರರಿದ್ದಾರೆ.

राम के एक लड़की है ರಾಮನಿಗೆ ಒಬ್ಬ ಮಗಳಿದ್ದಾಳೆ.

हाथी के चार पैर होते हैं ಆನೆಗೆ ನಾಲ್ಕು ಕಾಲುಗಳಿವೆ.

उसके दो घर हैं ಅವನಿಗೆ ಎರಡು ಮನೆಗಳಿವೆ.

79. ಕೆಳಗಿನ ಕ್ರಿಯಾಪದಗಳ ಹಿಂದೆ 'पर' ಎಂಬುದು ಬರುತ್ತದೆ.

**भरोसा करना** ಭರವಸೆಯನ್ನಿಡುವುದು, **यक़ीन (विश्वास) करना** ನಂಬಿಕೆಯಿಡುವುದು, **मेहरबानी (रहम) करना** ದಯೆ ತೋರುವುದು, **ज़बरदस्ती करना** ಬಲವಂತಪಡಿಸುವುದು, **हमला करना** ಮುತ್ತಿಗೆ ಹಾಕುವುದು, **शक करना** ಸಂದೇಹಪಡುವುದು, **ज़ुल्म करना**

ಪೀಡಿಸುವುದು, **इलज़ाम लगाना** ದೋಷಾರೋಪಣೆ ಮಾಡುವುದು, **नाराज़ (गुस्सा) होना** ಕೋಪಗೊಳ್ಳುವುದು.

ಉದಾ:—**उसपर भरोसा मत करो** ಅವನನ್ನು ನಂಬಿಕೊಂಡಿರಬೇಡಿ.

**वह लोगों पर ज़बरदस्ती करता है** ಅವನು ಜನರನ್ನು ಬಲಾತ್ಕರಿಸುತ್ತಾನೆ.

**यह इलज़ाम मुझपर क्यों लगाते हो?** ನನ್ನ ಮೇಲೆ ಈ ಆರೋಪವನ್ನು ಯಾಕೆ ಹೊರಿಸುತ್ತೀರಿ?

**वे मुझपर नाराज़ हैं** ಅವರು ನನ್ನ ಮೇಲೆ ಕೋಪಕೊಂಡಿದ್ದಾರೆ.

80. ಚತುರ್ಥಿಯ ಪ್ರಯೋಗಗಳು:—

(ಅ) ಕೆಳಗಿನ ನಾಮಪದಗಳು ಬಂದಾಗ ಕರ್ತೃಪದವು ಚತುರ್ಥಿಯಲ್ಲಿರುತ್ತದೆ:—**याद** ಜ್ಞಾಪಕ, **परवाह** ಲಕ್ಷ್ಯ, **डर** ಭಯ, **ज़रूरत** ಆವಶ್ಯಕತೆ, **खेद** ದುಃಖ, **खुशी** ಸಂತೋಷ, **रंज** ಚಿಂತೆ ಇತ್ಯಾದಿ.

ಉದಾ:—**मुझे याद है** ನನಗೆ ಜ್ಞಾಪಕವಿದೆ.

**उसको डर है** ಅವನಿಗೆ ಭಯವಿದೆ.

**मुझे खुशी है** ನನಗೆ ಸಂತೋಷವಿದೆ.

(ಆ) **पसंद** ಇಷ್ಟಪಡು; ಮೆಚ್ಚು, **मंजूर** ಒಪ್ಪು, **मालूम** ತಿಳಿದ ಎಂಬ ಕ್ರಿಯಾವಿಶೇಷಣಗಳ ಜೊತೆಯಲ್ಲಿ ಚತುರ್ಥಿ ಬರುವುದು.

ಉದಾ:—**मुझे पसंद है** ನನಗೆ ಇಷ್ಟವಾಗಿದೆ.

**उसको मंजूर है** ಅವನಿಗೆ ಒಪ್ಪಿಗೆ ಇದೆ.

**मुझे मालूम है** ನನಗೆ ತಿಳಿದಿದೆ.

(ಇ) **मिलना** ಹೊಂದು ಮತ್ತು **चाहिए** ಬೇಕು ಎಂಬ ಕ್ರಿಯಾಪದಗಳ ಜೊತೆಯಲ್ಲಿ ಚತುರ್ಥಿ ಬರುವುದು.

ಉದಾ :—मुझे एक पुस्तक मिली ನನಗೆ ಒಂದು ಪುಸ್ತಕ ಸಿಕ್ಕಿತು.

मुझे थोड़ा पानी चाहिए ನನಗೆ ಸ್ವಲ್ಪ ನೀರು ಬೇಕು.

राम को एक पुस्तक चाहिए ರಾಮನಿಗೆ ಒಂದು ಪುಸ್ತಕ ಬೇಕು.

81. "में से" ಮತ್ತು "पर से" ಎಂಬ ದ್ವಿದಳ ವಿಭಕ್ತಿಗಳು 'ಒಳಗಿಂದ' ಮತ್ತು 'ಇಂದ' ಎನ್ನುವ ಅರ್ಥವನ್ನು ಸೂಚಿಸುತ್ತವೆ.

ಉದಾ :—दोनों में से ಎರಡರೊಳಗಿಂದ.

समुद्र में से ಸಮುದ್ರದೊಳಗಿಂದ.

जेब में से ಜೇಬಿನೊಳಗಿಂದ.

पेड़ पर से ಮರದಿಂದ.

आसमान पर से ಆಕಾಶದಿಂದ.

| | |
|---|---|
| **प्रार्थना** (ಸ್ತ್ರೀ) ಪ್ರಾರ್ಥನೆ | **सलाम** ಸಲಾಮು |
| **कुशल** ಕ್ಷೇಮಸಮಾಚಾರ | **वादा** ವಾಗ್ದಾನ |
| **मुलाक़ात** (ಸ್ತ್ರೀ) ಭೇಟಿ | **इनकार** ತಿರಸ್ಕಾರ |
| **इलज़ाम** ದೋಷಾರೋಪಣೆ | **मरना** ಸಾಯುವುದು |
| **तारीफ़** (ಸ್ತ್ರೀ) ಹೊಗಳಿಕೆ | **शिकायत** (ಸ್ತ್ರೀ) ದೂರು |
| **नतीजा** ಫಲಿತಾಂಶ | **अजनबी** ಅಪರಿಚಿತ |

**गिरफ़्तार करना** ಕೈದುಮಾಡುವುದು

| | |
|---|---|
| **मैं ईश्वर से प्रार्थना करता हूँ कि वह तुम्हें कुशल से रखे।** | ನೀವು ಸುಖವಾಗಿರಬೇಕೆಂದು ನಾನು ದೇವರನ್ನು ಪ್ರಾರ್ಥಿಸುತ್ತೇನೆ. |
| **तू उससे क्या बातें करता है?** | ನೀನು ಅವನ ಸಂಗಡ ಏನು ಮಾತಾಡುತ್ತೀ? |

कल जब मैं बाज़ार जा रहा था तब एक अजनबी आदमी ने सलाम कर मुझसे पूछा—"तुम्हारे बाप का क्या नाम है?"

ನಿನ್ನೆ ನಾನು ಪೇಟೆಗೆ ಹೋಗುತ್ತಿರುವಾಗ ಒಬ್ಬ ಅಪರಿಚಿತನು ನಮಸ್ಕಾರ ಮಾಡಿ—"ನಿಮ್ಮ ತಂದೆಯ ಹೆಸರೇನು?" ಎಂದು ಕೇಳಿದನು.

घीवाले को देने के लिए मेरे भाई से दस रुपये माँग लाओ।

ತುಪ್ಪದವನಿಗೆ ಕೊಡುವುದಕ್ಕಾಗಿ ನನ್ನ ಸಹೋದರನಿಂದ ಹತ್ತು ರೂಪಾಯಿ ತೆಗೆದುಕೊಂಡು ಬನ್ನಿ.

मैं इस दुनिया में किसीसे नहीं डरता।

ನಾನು ಈ ಪ್ರಪಂಚದಲ್ಲಿ ಯಾರಿಗೂ ಹೆದರುವುದಿಲ್ಲ.

वे तुमसे तंग आ गये हैं।

ಅವರು ನಿಮ್ಮಿಂದ ಬೇಸರಗೊಂಡಿದ್ದಾರೆ.

मुझे एक ज़बरदस्त आदमी से पाला पड़ा है।

ನನಗೆ ಒಬ್ಬ ಬಲಶಾಲಿ ಮನುಷ್ಯನೊಡನೆ ಕೆಲಸಬಿದ್ದಿದೆ.

मैं कल सबेरे उनसे मुलाक़ात करूँगा।

ನಾಳೆ ಬೆಳಿಗ್ಗೆ ನಾನು ಅವರನ್ನು ಭೇಟಿ ಮಾಡುವೆನು.

वह मुझसे वादा कर चुका है; अब रुपये देने से इनकार नहीं कर सकता।

ಅವನು ನನಗೆ ವಾಗ್ದಾನಮಾಡಿ ಬಿಟ್ಟಿದ್ದಾನೆ, ಈಗ ಹಣ ಕೊಡಲು ತಿರಸ್ಕರಿಸಲಾರನು.

मेरे दोस्त उस लड़की से बहुत खुश हैं, वे ज़रूर उससे शादी करेंगे।

ನನ್ನ ಮಿತ್ರರು ಆ ಹುಡುಗಿಯ ವಿಚಾರವಾಗಿ ಬಹಳ ಸಂತೋಷಗೊಂಡಿದ್ದಾರೆ, ಅವರು ಅವಳನ್ನು ಖಂಡಿತವಾಗಿಯೂ ವಿವಾಹ ಮಾಡಿಕೊಳ್ಳುವರು.

उसपर भरोसा मत रखो, वह बड़ा बेईमान है।

ಅವನನ್ನು ನಂಬಬೇಡಿ, ಅವನು ಮಹಾ ಮೋಸಗಾರ.

तुम मुझपर यह झूठा इलज़ाम मत लगाओ।

ನನ್ನಮೇಲೆ ನೀವು ಈ ಸುಳ್ಳು ಆರೋಪಣೆಯನ್ನು ಹೊರಿಸಬೇಡಿ.

| | |
|---|---|
| आप मुझपर नाराज़ न होइये। | ನೀವು ನನ್ನ ಮೇಲೆ ಕೋಪಿಸಬೇಡಿ. |
| आजकल मुझपर आपकी मेहरबानी नहीं है। | ಇತ್ತೀಚೆಗೆ ನನ್ನ ಮೇಲೆ ತಮ್ಮ ದಯೆ ಇಲ್ಲ. |
| मुझे कुछ डर नहीं है, मैं अपना काम खुद संभाल लूँगा। | ನನಗೆ ಏನೂ ಹೆದರಿಕೆ ಇಲ್ಲ, ನನ್ನ ಕಾರ್ಯವನ್ನು ನಾನೇ ಸುಧಾರಿಸಿಕೊಳ್ಳುವೆನು. |
| तुम खुश रहो या नाखुश, उसे क्या परवाह है? | ನೀವು ಸಂತೋಷದಿಂದಿರಿ ಇಲ್ಲದಿರಿ ಅವನಿಗೇನು ಚಿಂತೆ? |
| मुझे उनका पता याद नहीं। | ನನಗೆ ಅವರ ವಿಳಾಸ ಜ್ಞಾಪಕವಿಲ್ಲ. |
| तुम्हारी बातें मुझे बिलकुल पसन्द नहीं। | ನನಗೆ ನಿಮ್ಮ ಮಾತುಗಳು ಸರ್ವಥಾ ಇಷ್ಟವಿಲ್ಲ. |
| आपको इतने रुपये कहाँ से मिले? | ನಿಮಗೆ ಇಷ್ಟು ಹಣ ಎಲ್ಲಿಂದ ಪ್ರಾಪ್ತವಾಯಿತು? |
| आजकल मैं बड़ी तकलीफ़ में हूँ। न मालूम खुदा को क्या मंजूर है। | ಇತ್ತೀಚೆಗೆ ನಾನು ಬಹಳ ಕಷ್ಟದಲ್ಲಿದ್ದೇನೆ, ದೇವರಿಗೆ ಯಾವುದು ಸಮ್ಮತವೋ ಗೊತ್ತಿಲ್ಲ. |
| वह आपकी बड़ी तारीफ़ करता है। | ಅವನು ನಿಮ್ಮನ್ನು ಬಹಳವಾಗಿ ಹೊಗಳುತ್ತಾನೆ. |
| मेरी शिकायत उनसे मत करो। | ನನ್ನ ಮೇಲೆ ಅವರೊಡನೆ ದೂರು ಹೇಳಬೇಡಿ. |
| उसको मेरा पता मालूम नहीं है। | ಅವನಿಗೆ ನನ್ನ ವಿಳಾಸವು ಗೊತ್ತಿಲ್ಲ. |
| मुझे हिन्दी अच्छी तरह मालूम है। | ನನಗೆ ಹಿಂದೀ ಚೆನ್ನಾಗಿ ಬರುತ್ತದೆ. |
| तुमको क्या चाहिए? | ನಿಮಗೆ ಏನು ಬೇಕು? |

| | |
|---|---|
| मुझे आपसे कुछ नहीं चाहिए। | ನನಗೆ ನಿಮ್ಮಿಂದ ಏನೂ ಬೇಕಾಗಿಲ್ಲ. |
| दोनों में से तुमको जो पसन्द हो ले लो। | ಎರಡರೊಳಗೆ ಮೆಚ್ಚುಗೆಯಾದುದನ್ನು ತೆಗೆದುಕೊಳ್ಳಿ. |
| कल उसका भाई पेड़ पर से गिर पड़ा। | ನಿನ್ನೆ ಅವನ ತಮ್ಮನು ಮರದಿಂದ ಬಿದ್ದು ಬಿಟ್ಟ. |

---

## ಪಾಠ 29
## ಲಗನಾ ಶಬ್ದದ ವಿವಿಧ ಪ್ರಯೋಗಗಳು

82. **लगना** ಎಂಬುದು ಹಿಂದಿಯಲ್ಲಿ ಬಾರಿಬಾರಿಗೂ ಉಪಯೋಗಿಸಲ್ಪಡುತ್ತದೆ. ಅದರ ಮೂಲಾರ್ಥವು 'ತಗಲುವುದು' ಎಂದು. ಈ ಅರ್ಥದಿಂದ ಅನೇಕ ಪ್ರಯೋಗಗಳು ಹುಟ್ಟಿವೆ. ಇವುಗಳಲ್ಲಿ ಈ ಶಬ್ದದ ಅರ್ಥಭೇದಗಳಿಂದ ಅನೇಕ ಪ್ರಯೋಗಗಳು ಹುಟ್ಟಿವೆ.

ಸೂಚನೆ:—**लगना** ಎನ್ನುವುದರ ಸಕರ್ಮಕ ಪ್ರಯೋಗವು **लगाना** ಎಂದಾಗುತ್ತದೆ.

(ಅ) ಸಾಧಾರಣವಾಗಿ ತಗಲಿರುವುದು—**किनारे लगना** ದಡವನ್ನು ಸೇರುವುದು (ದಡಕ್ಕೆ ತಗಲುವುದು), **गले लगना** ಆಲಿಂಗಿಸುವುದು (ಕುತ್ತಿಗೆಗೆ ತಗಲುವುದು), **दिल लगना** ಪ್ರೀತಿಸುವುದು ಅಥವಾ ಮನಸ್ಸಿಡುವುದು, **कान लगाना** ಕಿವಿಗೊಡುವುದು, **दोस्ती लगाना** ಸ್ನೇಹಮಾಡುವುದು, **दरवाज़ा लगाना** ಬಾಗಿಲು ಹಾಕುವುದು, **टकटकी लगाना** ಎವೆಯಿಕ್ಕದೇ ನೋಡುವುದು.

(ಆ) ಜೋರಾಗಿ ತಗಲಿರುವುದು—**चोट लगना** ಪೆಟ್ಟು ತಿನ್ನುವುದು, **गोली लगाना** ಗುಂಡು ನಾಟುವುದು, **बात लगना** ಒಬ್ಬರ ಮಾತಿನಿಂದ ವ್ಯಥೆಪಡುವುದು, **ठोकर लगना** ಎಡವಿ ಬೀಳುವುದು.

(ಇ) ಸಾಮೀಪ್ಯ—**उसका घर पाठशाला से लगा है** ಅವನ ಮನೆಯು ಪಾಠಶಾಲೆಯ ಹತ್ತಿರವಿದೆ.

(ಈ) ಕೆಲವು ಗುಣವಾಚಕಗಳ ಸಂಯೋಗದಿಂದ ಮನೋಭಾವ ಅಥವಾ ರುಚಿಯನ್ನು ತೋರಿಸುತ್ತದೆ—**अच्छा लगना** ಒಳ್ಳೆಯದಾಗಿ ತೋರುವುದು, **बुरा लगना** ಕೆಟ್ಟದಾಗಿ ತೋರುವುದು, **मीठा लगना** ಸಿಹಿಯಾಗಿ ತೋರುವುದು.

(ಉ) ಉದ್ಯುಕ್ತತೆ ಅಥವಾ ಮಗ್ನತೆ—**काम में लगना** ಕಾರ್ಯದಲ್ಲಿ ಉದ್ಯುಕ್ತನಾಗುವುದು, **पढ़ने में लगना** ಓದುವುದರಲ್ಲಿ ಮಗ್ನನಾಗುವುದು.

(ಊ) ಪ್ರಾರಂಭ ಸೂಚಕ—ಕ್ರಿಯಾರ್ಥಕ ಸಂಜ್ಞೆಯ ಕೊನೆಯ **आ** ವನ್ನು **ए** ಮಾಡಿ **लगना** ಸೇರಿಸಿದರೆ ಪ್ರಾರಂಭವನ್ನು ತೋರಿಸುತ್ತದೆ.

ಉದಾ :—**खाने लगना** ತಿನ್ನಲು ಆರಂಭಿಸುವುದು.

(ಋ) ಆರೋಪಣೆ—**दोष लगना** ದೋಷಾರೋಪಣೆ ಮಾಡುವುದು, **पाप लगाना** ಪಾಪವನ್ನು ಹೊರಿಸುವುದು, **पाप लगना** ಪಾಪ ತಟ್ಟುವುದು.

(ಎ) ಇತರ ಪ್ರಯೋಗ ವಿಶೇಷಗಳು—**प्यास लगना** ಬಾಯಾರುವುದು, **भूख लगना** ಹಸಿವಾಗುವುದು, **ढेर लगाना** ರಾಶಿಮಾಡುವುದು, **छाता लगाना** ಕೊಡೆ ಹಿಡಿಯುವುದು; ತೆರೆಯುವುದು, **पेड़ लगाना** ಗಿಡ ಹಾಕುವುದು, **हिसाब लगाना** ಲೆಕ್ಕಾಚಾರ ಮಾಡುವುದು, **पता लगाना** ಗುರುತು ಹಚ್ಚುವುದು (ಪತ್ತೆಮಾಡುವುದು), **ज़ोर लगाना** ಬಲ ಪ್ರಯೋಗ ಮಾಡುವುದು, **बाज़ार लगना** ಸಂತೆ ನೆರೆಯುವುದು, **भीड़ लगाना** ಗುಂಪು ಕೂಡುವುದು, **रंग लगाना** ಬಣ್ಣ ಹಾಕುವುದು, **ताला लगाना** ಬೀಗ ಹಾಕುವುದು, **आग लगाना** ಬೆಂಕಿ ಹಚ್ಚುವುದು, **तेल लगाना** ಎಣ್ಣೆ ಹಚ್ಚುವುದು, **कपड़े लगाना** ಬಟ್ಟೆ ಹಾಕಿಕೊಳ್ಳುವುದು, **दाम लगाना** ಬೆಲೆ ಕಟ್ಟುವುದು, **काम लगाना** ಕಾರ್ಯವನ್ನಾರಂಭಿಸುವುದು, **मतलब लगाना** ಯಥಾರ್ಥತೆಯನ್ನು ಗೊತ್ತು ಹಚ್ಚುವುದು, **अंदाज़ लगाना** ಊಹಿಸುವುದು.

(ಏ) ಸಂಬಂಧ—चाचा लगना ಚಿಕ್ಕಪ್ಪನಾಗುವುದು, वे मेरे मामा लगते हैं ಅವರು ನನಗೆ ಮಾವನಾಗಬೇಕು.

| | |
|---|---|
| **नाव** (ಸ್ತ್ರೀ) ನಾವೆ, ದೋಣಿ | **दिल** ಹೃದಯ |
| **तीर** ಬಾಣ | **धनुष** ಬಿಲ್ಲು |
| **भूख** (ಸ್ತ್ರೀ) ಹಸಿವೆ | **पेट** ಹೊಟ್ಟೆ |
| **प्यास** (ಸ್ತ್ರೀ) ಬಾಯಾರಿಕೆ | **धूप** (ಸ್ತ್ರೀ) ಬಿಸಿಲು |
| **छाता** ಕೊಡೆ, ಛತ್ರಿ | **भीड़** (ಸ್ತ್ರೀ) ಗುಂಪು |
| **हिसाब** ಲೆಕ್ಕ | **उठाना** ಎತ್ತುವುದು |
| **चपत** ಏಟು, ಪೆಟ್ಟು, ಘಾಯ | **आग** (ಸ್ತ್ರೀ) ಬೆಂಕಿ |
| **चोट** (ಸ್ತ್ರೀ) ಪೆಟ್ಟು, ಘಾಯ | **गाल** ಕೆನ್ನೆ, ಕಪಾಳ |

**नाक** (ಸ್ತ್ರೀ) ಮೂಗು

| | |
|---|---|
| हे ईश्वर, मेरी नाव पार लगा दे । | ಓ ಪರಮಾತ್ಮಾ, ನನ್ನನ್ನು ಕಷ್ಟಗಳಿಂದ ಪಾರು ಮಾಡು. |
| मुझे देखते ही उन्होंने गले लगा लिया । | ಅವರು ನನ್ನನ್ನು ನೋಡುತ್ತಲೇ ಆಲಿಂಗಿಸಿಕೊಂಡರು. |
| वह लड़का ख़ूब दिल लगाकर पढ़ता है । | ಆ ಹುಡುಗನು ಚೆನ್ನಾಗಿ ಮನಸ್ಸಿಟ್ಟು ಓದುತ್ತಾನೆ. |
| तुम्हें यह चोट कैसे लगी ? | ನಿಮಗೆ ಈ ಏಟು ಹೇಗೆ ತಗಲಿತು ? |
| मेरी बातें उनको तीर की तरह लगीं । | ನನ್ನ ಮಾತುಗಳು ಅವರಿಗೆ ಬಾಣದಂತೆ ನಾಟಿದುವು. |
| मेरा घर उसके घर से लगा हुआ है । | ನನ್ನ ಮನೆಯು ಅವನ ಮನೆಗೆ ಹೊಂದಿಕೊಂಡಿದೆ. |
| तुमको ये बातें बुरी क्यों लगती हैं ? | ನಿಮಗೇಕೆ ಈ ಮಾತುಗಳು ಕೆಟ್ಟವೆಂದು ಕಾಣುತ್ತವೆ ? |

| | |
|---|---|
| तुम्हें कौन फल सबसे मीठा लगता है? | ಯಾವ ಹಣ್ಣು ನಿಮಗೆ ಅತ್ಯಂತ ಮಧುರ ವಾಗಿದೆ? |
| वह काम में लगा है, उसे तंग मत करो। | ಅವನು ತನ್ನ ಕೆಲಸದಲ್ಲಿ ಮಗ್ನನಾಗಿದ್ದಾನೆ, ಅವನಿಗೆ ತೊಂದರೆ ಕೊಡಬೇಡಿ. |
| आप कब से यहाँ आने लगे हैं? | ತಾವು ಎಂದಿನಿಂದ ಇಲ್ಲಿಗೆ ಬರುವುದಕ್ಕೆ ಪ್ರಾರಂಭಿಸಿದ್ದೀರಿ? |
| तुम यह दोष मुझपर क्यों लगाते हो? | ನೀವು ಈ ದೋಷವನ್ನು ನನ್ನ ಮೇಲೇಕೆ ಆರೋಪಿಸುತ್ತೀರಿ? |
| मुझे बड़ी प्यास लगी है, थोड़ा पानी पिलाओ। | ನನಗೆ ತುಂಬಾ ಬಾಯಾರಿಕೆಯಾಗಿದೆ, ಸ್ವಲ್ಪ ನೀರು ಕುಡಿಸಿ. |
| मेरा पेट ठीक नहीं, आजकल मुझे भूख नहीं लगती। | ನನ್ನ ಹೊಟ್ಟೆಯು ಸರಿಯಾಗಿಲ್ಲ, ಇತ್ತೀಚೆಗೆ ನನಗೆ ಹಸಿವೆಯಾಗುವುದಿಲ್ಲ. |
| बड़ी धूप है, अपना छाता लगाओ। | ಬಹಳ ಬಿಸಿಲಾಗಿದೆ, ನಿಮ್ಮ ಕೊಡೆಯನ್ನು ಬಿಡಿಸಿ (ತೆರೆಯಿರಿ). |
| आप कब तक हिसाब लगाते रहेंगे? | ಎಂದಿನವರೆಗೆ ನೀವು ಲೆಕ್ಕಾಚಾರ ಮಾಡುತ್ತಾ ಇರುವಿರಿ? |
| क्या अभी तक उनका पता नहीं लगा? | ಇನ್ನೂ ಅವರ ಪತ್ತೆಯಾಗಲಿಲ್ಲವೇ? |
| बहुत ज़ोर लगाने पर भी रावण धनुष को नहीं उठा सका। | ತನ್ನ ಬಲವನ್ನೆಲ್ಲಾ ಉಪಯೋಗಿಸಿದಾಗ್ಯೂ ರಾವಣನು ಬಿಲ್ಲನ್ನು ಎತ್ತಲಾರದೇ ಹೋದನು. |
| अभी बाज़ार नहीं लगा? | ಸಂತೆಯು ಇನ್ನೂ ನೆರದಿಲ್ಲವೇ? |
| आपके घर के सामने इतनी भीड़ क्यों लगी है? | ನಿಮ್ಮ ಮನೆಯ ಮುಂದೆ ಇಷ್ಟೊಂದು ಗುಂಪು ಏಕೆ ಸೇರಿದೆ? |
| कल उस ग़रीब के घर में आग लग गयी। | ಆ ಬಡವನ ಮನೆಗೆ ನಿನ್ನೆಯದಿನ ಬೆಂಕಿ ಬಿತ್ತು. |

| | |
|---|---|
| मैंने इस वर्ष अपने बाग़ में आम के दस पेड़ लगवाये हैं। | ಈ ವರ್ಷ ನನ್ನ ತೋಟದಲ್ಲಿ ನಾನು ಹತ್ತು ಮಾವಿನ ಗಿಡಗಳನ್ನು ನೆಟ್ಟಿದ್ದೇನೆ. |
| वे तुम्हारे कौन लगते हैं? | ಅವರು ನಿಮಗೆ ಏನಾಗಬೇಕು? |
| वे मेरे साले लगते हैं। | ಅವರು ನನಗೆ ಭಾವಮೈದುನನಾಗಬೇಕು. |
| कल क्लास में मास्टर ने मेरे गाल पर दो चपत लगाये। | ನಿನ್ನೆ ಕ್ಲಾಸಿನಲ್ಲಿ ಉಪಾಧ್ಯಾಯರು ನನ್ನ ಕೆನ್ನೆಯ ಮೇಲೆ ಎರಡು ಏಟು ಕೊಟ್ಟರು. |

---

## ಪಾಠ 30

83. **भर, होगा, चाहिए** ಇತ್ಯಾದಿ ಪದಗಳ ಪ್ರಯೋಗಗಳು.

'**भर**' ಎಂಬುದು ಪೂರ್ಣತ್ವವನ್ನು ಸೂಚಿಸುತ್ತದೆ.

ಉದಾ:—**पेट-भर** ಅಥವಾ **भर पेट** ಹೊಟ್ಟೆ ತುಂಬ.

**दिन-भर** ಅಥವಾ **भर दिन** ದಿನವೆಲ್ಲಾ.

**घर-भर** ಮನೆಯೆಲ್ಲಾ.

**गाँव-भर** ಗ್ರಾಮವೆಲ್ಲಾ.

**मुट्ठी-भर** ಮುಷ್ಟಿ ತುಂಬ.

**ज़िन्दगी-भर** ಜೀವಮಾನವೆಲ್ಲಾ.

84. '**होगा**' ಎಂಬುದು ಸಾಧಾರಣವಾಗಿ 'ಇರಬಹುದು, ಆಗಿರಬಹುದು' ಎಂಬ ಅರ್ಥದಲ್ಲಿ ಉಪಯೋಗಿಸಲ್ಪಡುತ್ತದೆ.

ಉದಾ:—**वह घर में होगा** ಅವನು ಮನೆಯಲ್ಲಿ ಇರಬಹುದು.

**वही होगी** ಅವಳೇ ಆಗಿರಬಹುದು.

**कोई कारण होगा** ಯಾವುದೋ ಕಾರಣವಿರಬಹುದು.

**वह ग़रीब होगी** ಅವಳು ಬಡವಳಾಗಿರಬಹುದು.

ಒಂದು ಪ್ರಶ್ನೆಗೆ ಅದೇ ಬಗೆಯ ಆವೇಶದಿಂದ ಉತ್ತರಕೊಡುವಾಗಲೂ ಇದನ್ನು ಪ್ರಯೋಗಿಸಬಹುದು.

ಉದಾ :—**वे घर में होंगे?** ಅವರು ಮನೆಯಲ್ಲಿ ಇರಬಹುದೆ?
**होंगे** ಇರಬಹುದು.

85. "**चाहिए**" ಪ್ರಯೋಗ—

**चाहिए** ಎಂಬುದು 'ಬೇಕಾಗಿದೆ', 'ಅವಶ್ಯಕತೆಯುಂಟು' ಎಂಬ ಅರ್ಥವನ್ನು ಕೊಡುತ್ತದೆ. ಇದರ ಕರ್ತೃವು ಸದಾ ಚತುರ್ಥೀವಿಭಕ್ತಿಯಲ್ಲಿರುವುದು.

ಉದಾ :—**आपको क्या चाहिए?** ನಿಮಗೆ ಏನು ಬೇಕಾಗಿದೆ?
**मुझे थोड़ा पानी चाहिए** ನನಗೆ ಸ್ವಲ್ಪ ನೀರು ಬೇಕು.
**उसको कुछ आम चाहिए** ಅವನಿಗೆ ಕೆಲವು ಮಾವಿನ ಹಣ್ಣುಗಳು ಬೇಕು.

86. "**विना**" "ಹೊರತು" ಎಂಬುದರ ಪ್ರಯೋಗಾಧೀನ ರೂಪಗಳು—

ಉದಾ :—**खाये विना** ಅಥವಾ **बिना खाये** ತಿನ್ನದೆ.
**गये बिना** ,, **बिना गये** ಹೋಗದ ಹೊರತು.
**पढ़े बिना** ,, **बिना पढ़े** ಓದದ ಹೊರತು.
**कहे बिना** ,, **बिना कहे** ಹೇಳದ ಹೊರತು.

87. "**थोड़े ही**" ಎಂಬುದು ಕನ್ನಡದ "ಅಷ್ಟರಲ್ಲೇ ಇದೆ" ಎಂಬಂತೆ ಉಪಯೋಗಿಸಲ್ಪಡುವುದು. ಇದರಿಂದ ವ್ಯತಿರೇಕಾರ್ಥವು ಸೂಚಿಸಲ್ಪಡುತ್ತದೆ.

ಉದಾ :—**मैं थोड़े ही जाता हूँ** ನಾನು ಹೋಗುವುದು ಅಷ್ಟರಲ್ಲೇ ಇದೆ (ಅಂದರೆ—ನಾನು ಹೋಗುವುದಿಲ್ಲ).

मैंने थोड़े ही यह काम किया है ನಾನು ಈ ಕೆಲಸ ಮಾಡಿದ್ದು ಅಷ್ಟರಲ್ಲೇ ಇದೆ.

मैं थोड़े ही तुम्हें पहचानता हूँ ನನಗೆ ನಿನ್ನ ಗುರುತು ಅಷ್ಟರಲ್ಲೇ ಇದೆ.

88. "सा" ಎಂಬುದರ ಪ್ರಯೋಗ—

ಇದು ಗುಣವಾಚಕ ಪ್ರತ್ಯಯವಾದ್ದರಿಂದ (ವಿಶೇಷ್ಯ) ನಾಮಪದದ ಲಿಂಗವಚನಗಳಿಗನುಸಾರವಾಗಿ **सी** ಮತ್ತು **से** ಎಂಬ ರೂಪಾಂತರಗಳನ್ನು ಹೊಂದುತ್ತದೆ.

(1) "सा" ಕನ್ನಡದ "ಅಂತೆ" ಅರ್ಥದಲ್ಲಿ—

ಉದಾ:—वह राम-सा है ಅವನು ರಾಮನಂತೆ ಇದ್ದಾನೆ.

वह गोविन्द-सा दीखता है ಅವನು ಗೋವಿಂದನಂತೆ ಕಾಣಿಸುತ್ತಾನೆ.

राम की-सी उसकी सूरत है ಅವನ ರೂಪ ರಾಮನಂತೆ ಇದೆ.

काली-सी लड़की ಕರ್ರಗಿನ ಹುಡುಗಿ.

गोरा-सा चेहरा ಬೆಳ್ಳಗಿನ ಮುಖ.

(2) बहुत, बड़ा, छोटा, कौन ಮತ್ತು थोड़ा ಎಂಬವುಗಳ ಮುಂದೆ 'सा' ಬಂದರೆ ಅದಕ್ಕೇನೂ ವಿಶೇಷ ಅರ್ಥವಿಲ್ಲ. ಅದು ಕೇವಲ ಪ್ರಯೋಗಾಧೀನ ರೂಪವಾಗಿದೆ.

ಉದಾ:—बहुत-सा रुपया ಬಹಳ ಹಣ.

छोटा-सा लड़का ಚಿಕ್ಕವನಾದ ಹುಡುಗ.

थोड़ी-सी चीनी ಒಂದಿಷ್ಟು ಸಕ್ಕರೆ.

कौन-सा आदमी? ಯಾವ ಮನುಷ್ಯ?

(3) ಭೂತಕಾಲದಲ್ಲಿ **'सा'** ಪ್ರಯೋಗಿಸಲ್ಪಟ್ಟರೆ "....ದ ಹಾಗೆ" ಎಂಬ ಅರ್ಥ ಬರುತ್ತದೆ.

ಉದಾ :—**मैंने उसको कहीं देखा-सा है** ನಾನು ಅವನನ್ನು ಎಲ್ಲಿಯೋ ನೋಡಿದ ಹಾಗಿದೆ.

**मैंने यह गीत कहीं सुना-सा है** ನಾನು ಈ ಹಾಡನ್ನು ಎಲ್ಲಿಯೋ ಕೇಳಿದ ಹಾಗಿದೆ.

89. "न" ಮತ್ತು "या" ಪ್ರಯೋಗಗಳು ಸಾಧಾರಣವಾಗಿ ರೂಢಿಯಲ್ಲಿರುವ ನಿಷೇಧಾರ್ಥವಲ್ಲದೆ ಇದಕ್ಕೆ ಇನ್ನೊಂದು ಪ್ರಯೋಗಾಧೀನ ರೂಪವೂ ಇದೆ. ವಾಕ್ಯದಲ್ಲಿ 'न' ಬಂದರೆ 'ಅಲ್ಲವೇ ?' ಎಂಬ ಪ್ರಶ್ನಾರ್ಥಕವಾಗುತ್ತದೆ.

ಉದಾ :—**तुम घर जाते हो न ?** ನೀವು ಮನೆಗೆ ಹೋಗುತ್ತೀರಲ್ಲವೇ ?

**यह किताब उसकी है न ?** ಈ ಪುಸ್ತಕ ಅವನದಲ್ಲವೇ ?

**तुम्हीं हो न ?** ನೀವೇ ಅಲ್ಲವೇ ?

"..........................ವೂ ಇಲ್ಲ..........................ವೂ ಇಲ್ಲ" ಎಂಬರ್ಥದಲ್ಲಿಯೂ 'न' ವು ಪ್ರಯೋಗಿಸಲ್ಪಡುತ್ತದೆ.

ಉದಾ :—**न उसके पास रुपये हैं न कपड़े** ಅವನ ಹತ್ತಿರ ಹಣವೂ ಇಲ್ಲ ಬಟ್ಟೆಯೂ ಇಲ್ಲ.

**या** ಎಂಬುದನ್ನು "ಇದಾಗಲಿ ಅಥವಾ ಅದಾಗಲಿ" ಎಂಬರ್ಥದಲ್ಲಿ ಪ್ರಯೋಗಿಸುವುದು.

ಉದಾ :—**या तो तुम बोलो या मुझे बोलने दो** ನೀವಾದರೂ ಮಾತನಾಡಿ ಇಲ್ಲವೆ ನನ್ನನ್ನಾದರೂ ಮಾತಾಡಲಿಕ್ಕೆ ಬಿಡಿ.

90. **है** ಮತ್ತು **होता है** ಗಳ ಪ್ರಯೋಗ—

'**है**' ಎಂಬುದು ವಿಶಿಷ್ಟಸ್ಥಿತಿ (Particular and individual existence) ಯನ್ನು ಸೂಚಿಸುತ್ತದೆ.

ಉದಾ:—**वह आदमी अंधा है** ಆ (ನಿರ್ದಿಷ್ಟ) ಮನುಷ್ಯನು ಕುರುಡನು.

**वह कौआ काला है** ಆ (ನಿರ್ದಿಷ್ಟ) ಕಾಗೆಯು ಕರ್‍ರಗಿದೆ.

'**होता है**' ಎಂಬುದು ಸಾಮಾನ್ಯ ಅಥವಾ ಸ್ವಾಭಾವಿಕ ಸ್ಥಿತಿಯನ್ನು ತೋರಿಸುತ್ತದೆ.

ಉದಾ:—(ಅ) **कौए काले होते हैं** ಕಾಗೆಗಳು ಕಪ್ಪಗಿರುತ್ತವೆ.

**आदमी के दो पैर होते हैं** ಮನುಷ್ಯನಿಗೆ ಎರಡು ಕಾಲುಗಳಿರುತ್ತವೆ.

(ಆ) ಕಾರ್ಯದ ಪುನರಾವೃತ್ತಿಯನ್ನು ಸೂಚಿಸುವುದಕ್ಕೆ—

ಉದಾ:—**इस घर में रोज़ नाच होता है** ಈ ಮನೆಯಲ್ಲಿ ದಿನವೂ ನರ್ತನವು ಆಗುತ್ತಾ ಇರುತ್ತದೆ.

(ಇ) ಸಂಬಂಧವನ್ನು ಸೂಚಿಸುವುದಕ್ಕೆ—

ಉದಾ:—**कृष्ण तुम्हारा कौन होता है?** ಕೃಷ್ಣನು ನಿಮಗೆ ಏನಾಗಬೇಕು?

**वह मेरी चाची होती है** ಆಕೆಯು ನನಗೆ ಚಿಕ್ಕತಾಯಿ ಆಗಬೇಕು.

91. "**कि**" ಎಂಬುದರ ವಿಶೇಷ ಪ್ರಯೋಗಗಳು—

ಇದರ ಸಮುಚ್ಚಯ ಬೋಧಕಾವ್ಯಯ ರೂಪದ ಪ್ರಯೋಗವನ್ನು ಹಿಂದಿನ ಪಾಠಗಳಲ್ಲಿ ಉದಾಹರಿಸಲಾಗಿದೆ. ಅದನ್ನು 'ಅಥವಾ' ಎಂಬ ಅರ್ಥದಲ್ಲಿಯೂ ಉಪಯೋಗಿಸಲಾಗುವುದು.

ಉದಾ :—तुम जाओगे कि नहीं ? ನೀವು ಹೋಗುತ್ತೀರೋ ಅಥವಾ ಇಲ್ಲವೊ ?

तुम दिल्ली जाओगे कि कलकत्ता ? ನೀವು ದಿಲ್ಲಿಗೆ ಹೋಗುತ್ತೀರೋ ಅಥವಾ ಕಲ್ಕತ್ತೆಗೋ ?

है कि नहीं ? ಅಲ್ಲವೇ ?

92. "जो" ಎಂಬುದರ ಪ್ರಯೋಗಗಳು—

ಇದನ್ನು ಸರ್ವನಾಮವಾಗಿಯೂ, ಸಮುಚ್ಚಯ ಬೋಧಕಾವ್ಯಯವಾಗಿಯೂ ಪ್ರಯೋಗಿಸುವರು.

(1) ಸರ್ವನಾಮ—जो आदमी यहाँ रहता है वह मेरा बड़ा दोस्त है ಇಲ್ಲಿ ವಾಸಿಸುವ ಮನುಷ್ಯನು ನನ್ನ ಪರಮ ಮಿತ್ರನು. तुम जो कहो ನೀವು ಹೇಳಿದಂತೆ (17 ನೆಯ ಪಾಠವನ್ನು ನೋಡಿ). अच्छा हुआ जो तुम आ गये ನೀವು ಬಂದದ್ದು ಒಳ್ಳೆಯದಾಯಿತು. तुम कहाँ थे जो उसको आते नहीं देखा? ಅವನು ಬರುತ್ತಿದ್ದುದನ್ನು ನೋಡದಿರಲು (ಕಾಣದಂತೆ) ನೀವು ಎಲ್ಲಿದ್ದಿರಿ ?

(2) ಸಮುಚ್ಚಯಬೋಧಕಾವ್ಯಯ 'ರೆ' ಎಂಬರ್ಥದಲ್ಲಿ तुम जो अच्छा बनना चाहते हो तो अच्छे लोगों के साथ रहो ನೀವು ಒಳ್ಳೆಯವನಾಗಲಪೇಕ್ಷಿಸಿದರೆ ಸತ್ಪುರುಷರ ಸಹವಾಸದಲ್ಲಿ ವಾಸಿಸಿ.

ಇಲ್ಲಿ जो ಎಂಬುದು अगर, यदि ಎಂಬರ್ಥದಲ್ಲಿ ಬರುತ್ತದೆ.

| | |
|---|---|
| गोरा ಬೆಳ್ಳಗೆ | सफ़ेद ಬಿಳಿ |
| भोला ನಿಷ್ಕಪಟ, ಭೋಳೆ | काला ಕರಿ |
| केला ಬಾಳೆ | नारियल ತೆಂಗಿನಕಾಯಿ |
| पैर ಪಾದ, ಕಾಲು | इंतज़ारी करना ನಿರೀಕ್ಷಿಸುವುದು, ಎದಿರು ನೋಡುವುದು |
| चेहरा ಮುಖ | |

